ಜಯತು ಭಗವಾ‌ಞ್

ಬಾಲಸರಸ್ವತೀ ಗ್ರಂಥಮಾಲಾ

---

# ಮಿಂಚಿನ ಗೊಂಚಲು

# ೨

# ಹೆಂಗುಸು—ಎಂದರೆ, ಹೆಂಗುಸು



ವಿದ್ವಾಞ್

**ವಿದ್ಯಾಭೂಷಣ ಬಾಲಸರಸ್ವತಿಯವರಿಂದ**

ವಿರಚಿತವಾದುದು

---

ಬೆಂಗಳೂರು

ದಿ ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು

Price 12 As ]   1931   [ಬೆಲೆ ೧೨ ಆಣೆ.

Publisher,

**G. Siddappa, Photographer,**

BANGALORE CITY.

---

ಸೋಲ್ ಏಜಂಟರು,

**ಕೆ. ಎ. ಚೌರಪ್ಪ ಅಂಡ್ ಸನ್ಸ್,**

**ಪುಸ್ತಕ ವ್ಯಾಪಾರಿಗಳು,**

ಅವೆನ್ಯೂ ರೋಡ್, ಬೆಂಗಳೂರು ಸಿಟಿ



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

# ಪ್ರಸ್ತಾವನೆ

---

ಸತ್ಯ ಘಟನಾ ಮೂಲಕವಾದ ಕಥೆಗಳನ್ನು ಒಳಗೊಂಡಿರುವ ಮಿಂಚಿನ ಗೊಂಚಲಿನಲ್ಲಿ **“ ಹೆಂಗುಸು— ಎಂದರೆ, ಹೆಂಗುಸು ”** ಎಂಬುದು ಎರಡನೆಯ ಗ್ರಂಥವಾಗಿರುವುದು “ ಹೆಂಗುಸು— ಎಂದರೆ, ಹೆಂಗುಸು ” ಎಂದರೆ—ಸ್ತ್ರೀತ್ವವನ್ನು ಕಳೆದುಕೊಂಡು ಗಂಡುಬೀರಿಯಂತಾಗದೆ, ಧೈರ್ಯದಿಂದ ಸಂಸಾರಯಾತ್ರೆಯಲ್ಲಿ ಪುರುಷನಿಗೆ ಒತ್ತಾಸೆಯಾಗಿ ನಿಲ್ಲುವ ಹೆಂಗುಸೇ ಹೆಂಗುಸು ಎಂಬ ಅಭಿಪ್ರಾಯವನ್ನು ಮನದಲ್ಲಿಟ್ಟು, ನಾವು ಈ ಗ್ರಂಥಕ್ಕೆ **“ ಹೆಂಗುಸು— ಎಂದರೆ, ಹೆಂಗುಸು ”** ಎಂದು ನಾಮಕರಣಮಾಡಿರುವೆವು ಆತ್ಮೋದ್ಧಾರದಲ್ಲಿ, ತನ್ಮೂಲಕವಾಗಿ ದೇಶೋದ್ಧಾರದಲ್ಲಿ ಪುರುಷನು ಜೀವನ ರಂಗಭೂಮಿಯಲ್ಲಿ ಹೇಗೆ ಪಾತ್ರವನ್ನು ವಹಿಸುವನೋ, ಹಾಗೆಯೇ ಸ್ತ್ರೀಯಾದವಳೂ ತಕ್ಕ ಪಾತ್ರವನ್ನು ವಹಿಸಿದ ಹೊರತು ಜೀವನ ನಾಟಕವು ಸರ್ವತೋಮುಖವಾದ ಸೌಂದರ್ಯದಿಂದ ಅಭಿನಯಿಸಿದಂತಾಗಲಾರದು ಹೇಳುವುದಕ್ಕೆ ಬಂದುದೇನೆಂದರೆ—ಪುರುಷನು ಪುರುಷಧರ್ಮವನ್ನೂ, ಸ್ತ್ರೀಯು ಸ್ತ್ರೀಧರ್ಮವನ್ನೂ ಅನುಸರಿಸಿದ ಹೊರತು ದೇಶವು ಏಳಿಗೆಗೆ ಬರುವಂತಿಲ್ಲ ದೇಹದಲ್ಲಿ ಒಂದಂಗವು ಪುಷ್ಟವಾಗಿಯೂ, ಮತ್ತೊಂದು ಕೃಶವಾಗಿಯೂ ಇರುವುದಾದರೆ, ಅದನ್ನು ನಾವು ರೋಗದ ಪರಿಣಾಮವೆಂದು ಹೇಗೆ ನಿರ್ಣಯಿಸುವೆವೋ, ಹಾಗೆಯೇ ಜನಾಂಗದಲ್ಲಿ ಸ್ತ್ರೀ ಪುರುಷರಿಬ್ಬರೂ ತಮ್ಮ ತಮ್ಮ ಧರ್ಮಗಳನ್ನನುಸರಿಸುತ್ತಾ ಅನ್ಯೋನ್ಯಭಾವದಿಂದ ವರ್ತಿಸದೇ ಹೋಗುವುದಾದರೆ, ಆ ಜನಾಂ

ಗೆವು ಸರಿಯಾದ ಏಳಿಗೆಯನ್ನು ಹೊದ್ದಲಾರದೆ, ದಿನದಿನಕ್ಕೆ ಕ್ಷೀಣ ದಶೆಗೆ ಬರುವುದೆಂಬುದನ್ನು ಕುರಿತು ನಾವು ಇಲ್ಲಿ ವಿಶೇಷವಾಗಿ ತಿಳಿಸಬೇಕಾದುದೇನೂ ಇರುವುದಿಲ್ಲ. ಆದುದರಿಂದ ಈ ಕಥಾ ನಾಯಿಕೆಯಾದ ಸರೋಜಸುಂದರಿ ಯೆಂಬುವಳು ಈ ಗ್ರಂಥದ ೮೫ನೆಯ ಪುಟದಲ್ಲಿ ತನ್ನ ಬಾಯಿಂದಲೇ ಹೇಳಿರುವಂತೆ, ಎಲ್ಲಾ ಸ್ತ್ರೀಯರೂ ತಮತಮಗೆ ಉಕ್ತವಾಗಿರುವ ಸ್ತ್ರೀಧರ್ಮವನ್ನು ಅವಲಂಬಿಸಿ ಸಂಸಾರವನ್ನು ನಿರ್ವಹಿಸಿಕೊಂಡು ಬಂದಲ್ಲಿ, ನಮ್ಮ ದೇಶವು ಉನ್ನತಿವೆತ್ತು ಕೀರ್ತಿಯನ್ನು ಪಡೆವುದಲ್ಲದೆ, ಪ್ರಜೆಗಳೂ ಇಹದಲ್ಲಿ ಸುಖಶಾಂತಿಗಳನ್ನೂ, ಪರದಲ್ಲಿ ಶಾಶ್ವತವಾದ ಸದ್ಗತಿಯನ್ನೂ ಪಡೆದುಕೊಂಡು ಪುಣ್ಯಶ್ಲೋಕರೆನಿಸುವುದರಲ್ಲಿ ಏನೇನೂ ಸಂಶಯವಿರಲಾರದು

ನಮ್ಮ ದೇಶದ ಮಹಿಳೆಯರೆಲ್ಲರೂ ನಮ್ಮ ಕಥಾನಾಯಿಕೆಯಾದ ಸರೋಜಸುಂದರಿಯಂತೆ 'ಹೆಂಗುಸು—ಎಂದರೆ, ಹೆಂಗುಸು' ಎಂಬ ಬಿರುದನ್ನು ಪಡೆದು ಸುಖದಿಂದ ಬಾಳಿ ಬದುಕಿ ಹೆಸರ ಹೇಳಬೇಕೆಂಬುದೇ ಈ ಕ್ಷುದ್ರ ನವನ್ಯಾಸದ ಪರಮೋದ್ದೇಶವು.

೫ ಸೆಪ್ಟೆಂಬರ್ ೧೯೩೧,
ಮೈಸೂರು

ದೇಶಭಾಷಾಭಿಮಾನಿವಶಂವದ,
**"ಬಾಲಸರಸ್ವತಿ."**

ಜಯತು ಭಗವಾನ್

**ಬಾಲಸರಸ್ವತೀ ಗ್ರಂಥಮಾಲಾ**

---

# ಮಿಂಚಿನ ಗೊಂಚಲು

# ೨

# ಹೆಂಗುಸು—ಎಂದರೆ, ಹೆಂಗುಸು

**ಮೊದಲನೆಯ ವಿಲಾಸ.**

## ದುರದೃಷ್ಟದ ದುಷ್ಪರಿಣಾಮ

" ಬ್ರಹ್ಮಾಂಡಕೋಟಿನಾಯಕನಾದ ಪರಮಾತ್ಮನು ಯೋಗ ನಿದ್ರೆಯಲ್ಲಿದ್ದರೂ ಜಾಗರೂಕನಾಗಿ ದೃಶ್ಯಾದೃಶ್ಯವಾದ ಸಮಸ್ತ ಚರಾಚರ ಪ್ರಪಂಚವನ್ನೂ ಸತ್ಯ ಧರ್ಮಗಳಿಂದ ಕಾಪಿಡುತ್ತಿರುವನು ಆತನು ಸಜ್ಜನರನ್ನು ಭೂಷಿಸುವನು ; ದುರ್ಜನರನ್ನು ದೂಷಿಸುವನು ಆತನಲ್ಲಿ ಸನ್ಮಾರ್ಗಗಾಮಿಗೆ ಪುರಸ್ಕಾರವುಂಟು ; ದುರ್ಮಾರ್ಗಗಾಮಿಗೆ ತಿರಸ್ಕಾರವುಂಟು ಕಾರಣವೇನೆಂದರೆ— ಸತ್ಯ ಧರ್ಮಗಳಿಗೆ ವಿರುದ್ಧವಾಗಿ ಆಚರಿಸ ಕೂಡದೆಂಬುದೇ ಆತನ ಲೀಲಾ ವಿಲಾಸವು.

---

**ವಿದ್ವಾನ್ ವಿದ್ಯಾಭೂಷಣ ಬಾಲಸರಸ್ವತಿಯವರಿಂದ ವಿರಚಿತವಾದುದು.**

ಮಾನವನು ಸತ್ಯ ಧರ್ಮಗಳೆಂಬ ಪ್ರಕೃತಿ ನಿಯಮಗಳಿಂದ ರಕ್ಷಿಸಲ್ಪಡುತ್ತಿರುವ ಭಗವಂತನ ಪ್ರಪಂಚವನ್ನು ಒತ್ತಟ್ಟಿಗಿಟ್ಟು, ತಾನೇ ಒಂದು ಪ್ರಪಂಚವನ್ನು ಏರ್ಪಡಿಸಿಕೊಂಡಿರುವನು ಅದರಲ್ಲಿ 'ಮಹಾಜನೋ ಯೇನ ಗತಸ್ಸಪಂಥಾಃ' ಎನ್ನುವಂತೆ ಹತ್ತಾರು ಜನರು ಹೇಳಿದುದೇ ಸತ್ಯವು, ನಡೆದುದೇ ಧರ್ಮವು. ಇಂತಹ ಸತ್ಯಧರ್ಮಗಳನ್ನು ಆಧಾರವಾಗಿಟ್ಟುಕೊಂಡು, ಮಾನವ ಮಹಾಶಯನು ಪ್ರಪಂಚದ ವ್ಯಾಪಾರವನ್ನು ನಡೆಯಿಸುತ್ತಿರುವನು

ದೂರದೃಷ್ಟಿಯಿಲ್ಲದ ಮಾನವನ ಇಂತಹ ವ್ಯವಹಾರಗಳಿಂದ, ಬಲು ತೆರನಾಗಿ ನ್ಯಾಯವು ಅನ್ಯಾಯವಾಗಿಯೂ, ಅನ್ಯಾಯವು ನ್ಯಾಯವಾಗಿಯೂ ವಿಪರಿಣಾಮವನ್ನು ಹೊದ್ದುತ್ತಿರುವುದು ಅದೊಂದು ಶೋಚನೀಯವಾದ ವಿಷಯವೇ ಆಗಿರುವುದು ಒಬ್ಬನ ಮಾತು ಒಬ್ಬನಿಗಿಲ್ಲದ ಈ ಪ್ರಪಂಚದಲ್ಲಿ, 'ಆರಿಗಾರೋ ಭಗವಂತ!' ಎನ್ನುವಂತೆ, ಆರು ಆರಿಗೆ ಆವುದನ್ನು ತಿಳಿಸುವುದಕ್ಕಾದೀತು? ಈ ಪ್ರಪಂಚದಲ್ಲಿ ಒಬ್ಬೊಬ್ಬನೂ ತನ್ನನ್ನು ಬುದ್ಧಿಮಂತರಿಗೆ ಬುದ್ಧಿಮಂತನೆಂದು ತಿಳಿದು ಹೆಮ್ಮೆಯಿಂದ ವರ್ತಿಸುತ್ತಿರುವಲ್ಲಿ, ಒಬ್ಬನ ಮಾತು ಮತ್ತೊಬ್ಬನಿಗೆ ಹಿತವಾಗುವ ಮಾತು ಹಾಗಿರಲಿ; ಅದು ಅವನಿಗೆ ವಿಷವಾಗಿಯೇ ಪರಿಣಮಿಸೀತು ಹೀಗೆಂದ ಮೇಲೆ ಆರು ತಾನೇ ಸುಖದಿಂದ ಬಾಳಿ ಬದುಕಿ ಹೆಸರು ಹೇಳುವುದಕ್ಕಾದೀತು? ಪುರುಷ ಪ್ರಯತ್ನದಿಂದ ಬಾಳಿ ಬದುಕೋಣವೆಂದರೆ, ಅದಕ್ಕೆ ಪ್ರತಿಯಾಗಿ ಮತ್ತೊಂದು ಪುರುಷ ಪ್ರಯತ್ನವು ಅಡ್ಡಲಾಗಿ ಬಂದು ನಿಲ್ಲುವುದು ಅದೃಷ್ಟದ ಮೇಲೆ ಈ ದೋಷವನ್ನು ಒರಗಿಸೋಣವೆಂದರೆ, ಅನೇಕರು ಇದನ್ನು ಒಪ್ಪುವ ಹಾಗಿಲ್ಲ.

ಕೆಲಸ ಮಾಡೋಣವೆಂದರೆ ವಿಘ್ನ ಪರಂಪರೆಗಳು ; ಅದೃಷ್ಟವನ್ನು ನಂಬಿ ಕುಳಿತರೆ, ಹೊಟ್ಟೆಗಿಲ್ಲದೆಯೋ ಸಾಯಬೇಕಾಗುವುದು ವಿದ್ಯೆಗೆ ಗೌರವವಿಲ್ಲ, ಬುದ್ಧಿಯನ್ನು ಆರೂ ಲೆಕ್ಕಿಸರು ಸನ್ಮಾರ್ಗವನ್ನು ಅವಲಂಬಿಸಿ ನಡೆಯುವವರನ್ನು ಹೀಯಾಳಿಸುವರು, ದುರ್ಮಾರ್ಗ ಗಾಮಿಗಳಿಗೆ ಅಧಿಕವಾಗಿ ತೊಂದರೆಯುಂಟು

ಮಾತನಾಡುವವನಾದರೆ, ಆತನ ಬಾಯಿಗೆ ಬೀಗ ಮುದ್ರೆ ; ಸುಮ್ಮನಿರುವವನನ್ನು ಕಂಡರೆ, ಹಲ್ಲ ಕಿತ್ತ ಹಾವಿನಂತೆ ಆಟವಾಡಿಸುವರು ಕೇಳಿದವನಿಗೆ ಇಲ್ಲವಾದರೆ, ಕೇಳದವನಿಗೆ ಇಲ್ಲವೇ ಇಲ್ಲ ದುಷ್ಟನನ್ನು ದೂರಮಾಡುವರು, ಶಿಷ್ಟನನ್ನು ಮರತೇ ಬಿಡುವರು

ಕೆಲವರು ತಪ್ಪನ್ನು ನಿಜಮಾಡುವರು ; ಮತ್ತೆ ಕೆಲವರು ನಿಜವನ್ನು ತಪ್ಪೆಂದು ಸಾಧಿಸುವರು ಒಬ್ಬನು ಅಹುದೆಂದ ಕೂಡಲೆ, ಇನ್ನೊಬ್ಬನು ಅಲ್ಲವೆನ್ನುವನು ಇವರಿಂದ 'ಆಗುವ ಕೆಲಸಕ್ಕೆ ಹಿಂದಾಳು, ಆಗದ ಕೆಲಸಕ್ಕೆ ಮುಂದಾಳು,' ಎನ್ನುವಂತೆ ಜನರ ನಡೆವಳಿಯು ತೋರಿಬರುತ್ತಿರುವುದು ಇದು ದೇವತಾ ಪ್ರಪಂಚವಲ್ಲ ; ಇದು ಮಾನವನ ನವ ಪ್ರಪಂಚದ ಲೀಲಾ ವಿಲಾಸವು ಆವುದರಲ್ಲಿಯೂ ಸ್ಥಿರಬುದ್ಧಿಯನ್ನಿಡದೆ, ಪಾಪಪುಣ್ಯಗಳ ವಿವೇಚನೆಯನ್ನು ಮನದಲ್ಲಿ ತಂದುಕೊಳ್ಳದೆ, ಆಯಾ ಸಮಯಕ್ಕೆ ಸರಿಯಾಗಿ ವರ್ತಿಸುತ್ತಾ, ಗಾಳಿ ಬಂದಾಗ ತೂರಿಕೊಳ್ಳುವವನೊಬ್ಬನೇ ಕೊಂಚ ಕಾಲವಾದರೂ ಬದುಕಿಯಾನು ಇದು ಎಲ್ಲರ ಪಾಲಿಗೂ ಬಂದುದಲ್ಲ ಹಾ ಲೋಕದ ತತ್ತ್ವವೇ! ನಿನ್ನ ತತ್ತ್ವದ ತತ್ತ್ವವಾದರೂ ಏನು ?

ನಾನು ನಿರಪರಾಧಿ ; ಆದರೂ ಕಾರಾಗೃಹದ ದುಃಖಾನುಭವವು ನನ್ನ ಪಾಲಿಗೆ ಬಂದಿರುವುದು ಜೀವಿತ ಕಾಲದಲ್ಲಿ ಆವ

ಪ್ರಾಣಿಗೂ ಮನೋವಾಕ್ಕಾಯ ಕರ್ಮಗಳಿಂದಲೂ ಕೆಡುಕನ್ನೇ ಬಯಸದ, ಮಾನದಿಂದಲೇ ಬದುಕಬೇಕೆಂದು ಬಯಸಿದ ಯುವಕನಿಗೆ ಇದೊಂದು ಗದಾ ಪ್ರಹಾರವು ಈ ಪ್ರಹಾರದಿಂದ ನನ್ನ ಜೀವಿತ ಶೇಷವು ಹಾಳಾಗಿ ಹೋಗುವ ಕಾಲವು ಒದಗಿ ಬಂದಿರುವುದು. ಹಾ ದೈವವೇ! ನನ್ನನ್ನು ಬದುಕಿಸಿ ಕೊಲ್ಲುವುದಕ್ಕಿಂತಲೂ, ಕೊಂದು ಬದುಕಿಸು ನಿನಗೆ ಭಗವಂತನು ಮಂಗಳವನ್ನುಂಟು ಮಾಡಿಯಾನು ''

ಲೋಕದಲ್ಲಿ ಎಲ್ಲರಂತೆಯೇ ಬದುಕಬೇಕೆಂಬ ಆಸೆಯನ್ನಿಟ್ಟುಕೊಂಡಿದ್ದ ಇಪ್ಪತ್ತು ವರ್ಷದ ಯುವಕನೊಬ್ಬನು ವಿಲಾಸ ಪುರದ ಕಾರಾಗೃಹದಲ್ಲಿ ಕುಳಿತು, ತಲೆಯ ಮೇಲೆ ಕೈಗಳನ್ನು ಹೊತ್ತುಕೊಂಡು ಹಿಂದೆ ಉಕ್ತವಾಗಿರುವಂತೆ ಪರಿಪರಿಯಾಗಿ ಚಿಂತಿಸಲಾರಂಭಿಸಿದನು

ಉತ್ತರ ದೇಶದ ಒಂದು ಗ್ರಾಮದಲ್ಲಿ ಜನಿಸಿದ ಮಧುಮಾಧವನೆಂಬ ಯುವಕನೊಬ್ಬನು ಅನೇಕ ಕಾರಣಗಳಿಗೊಳಪಟ್ಟು ದಕ್ಷಿಣ ದೇಶಕ್ಕೆ ಪಯಣಮಾಡಿಕೊಂಡು ಬಂದು ವಿಲಾಸಪುರದ ಯೋಗೆ ನಾರಾಯಣದಾಸನ ಕೋಠಿಯಲ್ಲಿ ಒಂದು ಕೆಲಸಕ್ಕೆ ನಿಂತನು ಆ ಕೋಠಿಯಲ್ಲಿ ಎರಡು ವರ್ಷಗಳ ಕಾಲ ಕೆಲಸಮಾಡುವುದರಲ್ಲಿ, ಮಧುಮಾಧವನು ಅಲ್ಲಿಯ ಅಧಿಕಾರಿಗಳ ವಿಶ್ವಾಸಕ್ಕೂ ಪ್ರೀತಿಗೂ ಪಾತ್ರವಾಗಿ ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿದ್ದನು. ಆ ಯುವಕನ ಅವಯವಘಟನಾವಿಶೇಷವು ದರ್ಶನೀಯವಾಗಿದ್ದುದರಿಂದ, ಎಲ್ಲರೂ ಪ್ರೀತಿಸುವುದಕ್ಕ ಅದೂ ಒಂದು ಕಾರಣವಾಗಿದ್ದಿತು.

ಮಧುಮಾಧವನು ವಿಲಾಸಪುರಕ್ಕೆ ಬಂದು ವಾಸಮಾಡುವುದಕ್ಕೆ ಪ್ರಾರಂಭಮಾಡಿದ ಮೇಲೆ, ಆತನಿಗ ರೂಪಾನುರೂಪರೂ ಗುಣಾನುಗುಣರೂ ಆದ ಕೆಲವು ಜನ ಸ್ನೇಹಿತರು ಏರ್ಪಟ್ಟರು ಮಧುಮಾಧವನು ತನ್ನ ಸ್ನೇಹಿತರೊಡನೆ ಬೆರೆತು ಸರಸ ಸಲ್ಲಾಪಗಳಲ್ಲಿ ಕಾಲವನ್ನು ಕಳೆಯುತ್ತಿದ್ದನಾದರೂ, ಆತನೊಂದು ದಿನವೂ ತನ್ನ ಪೂರ್ವವೃತ್ತಾಂತವನ್ನಾಗಲಿ, ತನ್ನ ದೇಶದ ಚರಿತ್ರೆಯನ್ನೇ ಆಗಲಿ ಎತ್ತಿ ಮಾತನಾಡುತ್ತಿರಲಿಲ್ಲ ಇದೇ ಒಂದು ಅಪರಾಧವಾಗಿ ಪರಿಣಮಿಸಿ, ಈತನ ಜನ್ಮದಲ್ಲಿ ಏನೋ ರಹಸ್ಯವಿರಬೇಕೆಂದೂ, ಈತನ ಬಾಲ್ಯದ ನಡೆವಳಿಯು ಅಷ್ಟಾಗಿ ಶುದ್ಧವಿರಲಿಕ್ಕಿಲ್ಲವೆಂದೂ ಅದೊಂದು ಕಳಂಕವು ಜನಜನಿತವಾಗಿ ಬಿತ್ತರಿಸಲಾರಂಭಿಸಿತು ಕಟ್ಟಕಡೆಗೆ ಈತನಿಗೆ ದುರ್ದೈವದಿಂದಲೋ ಎಂಬಂತ ಒಬ್ಬ ಗೂಢ ಶತ್ರುವೂ ಹುಟ್ಟಿಕೊಂಡನು ಆತನ ಮೂಲಕವಾಗಿ ಕಟ್ಟ ಸುದ್ದಿಗಳೂ ತೆರ ತೆರನಾಗಿ ಉತ್ಪ್ರೇಕ್ಷಾತಿಶಯೋಕ್ತಿಗಳೊಡನೆ ಹರಡಿ, ಅವು ಯೋಗೆ ನಾರಾಯಣದಾಸನ ಕಿವಿಯಲ್ಲಿಯೂ ಬಿದ್ದವು ಕೂಡಲೆಯೇ ಯೋಗೆನಾರಾಯಣದಾಸನು ಮಧುಮಾಧವನನ್ನು ಗೋಪ್ಯವಾಗಿ ಕರೆಯಿಸಿಕೊಂಡು, ತಾನು ಕೇಳಿದ ಸುದ್ದಿಗಳನ್ನು ಆ ಯುವಕನಿಗೆ ತಿಳಿಸಿದನು ಯುವಕನು ಸಲ್ಲದ ಈ ಸುದ್ದಿಯನ್ನು ಕೇಳಿ ಬಾಡಿದ ಮುಖವುಳ್ಳವನಾಗಿ ಆಪ ಉತ್ತರವನ್ನೂ ಕೊಡಲಾರದವನಾಗಿ ಸುಮ್ಮನೆ ನಿಂತಿರಲು, ಯಜಮಾನನು—ಮಗು! ಈ ಸುದ್ಧಿಗಳಲ್ಲಿನ ತತ್ತ್ವವಾದರೂ ಏನು? ಎಂದು ಪ್ರಶ್ನೆ ಮಾಡಿದನು

ಯುವಕ—ಅವುಗಳು ಹೊಟ್ಟೆಯ ಕಿಚ್ಚಿನ ಸುದ್ದಿಗಳು

ಯಜಮಾನ—ಮಧುಮಾಧವ! ನೀನಾಡುವ ಮಾತಿಗೆ ಪ್ರಮಾಣವೇನು? ನಿನ್ನ ಪೂರ್ವವೃತ್ತಾಂತವನ್ನು ಅರಿತ ಮಹನೀಯ ರಾರಾದರೂ ಇರುವುದಾದರೆ, ಅವರ ಹೆಸರನ್ನು ತಿಳಿಸು. ನಾನು ಅವರೊಡನೆ ವ್ಯವಹರಿಸಿ ನೋಡುವೆನು

ಯುವಕ—ಪೂಜ್ಯ ಮಹಾಶಯ! ನನಗೆ ಆವ ಪ್ರಮಾಣವೂ ಇಲ್ಲ; ನನ್ನನ್ನು ಗುರುತಿಸ ಬಲ್ಲ ಆವ ಮಹನೀಯರನ್ನೂ ನಾನು ಕಾಣೆನು

ಯಜ—ಇದು ಶೋಚನೀಯವೇ ಸರಿ

ಯುವಕ—ನನಗೆ ಉತ್ತರದಲ್ಲಿ ಆರೂ ಪರಿಚಿತರಿಲ್ಲದಿರುವುದರಿಂದ, ಇದು ಶೋಚನೀಯವಾದುದೇ ಸರಿ ನಾನು ನನ್ನ ದೇಶವನ್ನು ತ್ಯಾಗಮಾಡಿ ಇಂದಿಗೆ ಎಷ್ಟೋ ವರ್ಷಗಳಾಗಿ ಹೋದುವು. ನಾನು ಕೇವಲ ಬಾಲ್ಯದಲ್ಲಿ ದೇಶವನ್ನು ಬಿಟ್ಟು ಹೊರಟು ಬಂದಿರುವುದರಿಂದ, ಈಗ ನಾನು ಆರ ಪರಿಚಯವನ್ನು ತಮಗೆ ತಿಳಿಯ ಪಡಿಸಲಿ?

ಯಜ—ನಿನ್ನ ಮಾತಾಪಿತೃಗಳು ಬದುಕಿರುವರೇ?

ಯುವಕ—ನನ್ನ ತಂದೆಯು ಬದುಕಿದ್ದರೂ ಬದುಕಿರಬಹುದು; ಅದೂ ನನಗೆ ಚೆನ್ನಾಗಿ ಗೊತ್ತಿಲ್ಲ.

ಯಜ—ನಿನ್ನ ತಂದೆಯ ವಿಷಯವೂ ಗೊತ್ತಿಲ್ಲವೇ?

ಯುವಕ—ಗೊತ್ತಿಲ್ಲ, ಪ್ರಭೂ!

ಯಜ—ನೀನು ಆತನನ್ನಾದರೂ ಬಲ್ಲೆಯಷ್ಟೇ?

ಯುವಕ—ನಾನು ನನ್ನ ತಂದೆಯಿಂದ ಬೇರ್ಪಟ್ಟಾಗ, ಬಲು ಚಿಕ್ಕವನಾಗಿದ್ದೆನು.

ಯಜ—ನನ್ನ ಪ್ರಶ್ನೆಗಳಿಗೆ ನಿನ್ನಿಂದ ಆವ ಉತ್ತರವೂ ಬರುವಂತೆ ಕಾಣುವುದಿಲ್ಲ.

ಯುವಕ—ಇಲ್ಲ.

ಯಜ—ಇಷ್ಟಾದರೂ ನೀನು ಇಲ್ಲಿ ನಂಬುಗೆಯನ್ನು ಉಳಿಸಿಕೊಂಡು, ನಮ್ಮಗಳ ಪ್ರೀತಿಗೆ ಪಾತ್ರವಾಗಿರುವೆ.

ಯುವಕ—ಮಹಾಶಯ! ನಾನು ಆವಾಗಲೂ ನನ್ನ ಕರ್ತವ್ಯವನ್ನು ಚೆನ್ನಾಗಿಯೂ ಅರಿತುಕೊಂಡಿರುವೆನು ನಾನು ತಮ್ಮಲ್ಲಿ ಎರಡು ವರ್ಷಗಳಿಂದಲೂ ಕೆಲಸಮಾಡಿಕೊಂಡು ಬರುತ್ತಿರುವೆನು ನನ್ನ ಯೋಗ್ಯತೆಯನ್ನು ಅರಿವುದಕ್ಕೆ ಇಷ್ಟು ಕಾಲದ ಅನುಭವವು ನಾಲದೇ?

ಯಜ—ಸಾಲದು ನಿನ್ನ ವಿಷಯವಾಗಿ ದಿನದಿನಕ್ಕೂ ಕೆಟ್ಟ ಸುದ್ದಿಗಳು ಮೇಲಿಂದ ಮೇಲೆ ಹರಡುತ್ತಲೇ ಇರುವುವು ಇದನ್ನು ನೀನು ಹೋಗಲಾಡಿಸಿಕೊಳ್ಳುವುದಕ್ಕೆ ನನಗೆ ಸರಿಯಾದ ಕಾರಣಗಳನ್ನು ತಂದೊಪ್ಪಿಸದಿದ್ದಲ್ಲಿ, ನಾನು ನಿನ್ನನ್ನು ಕೆಲಸದಲ್ಲಿಟ್ಟರಲಾಗುವುದಿಲ್ಲ. ನಿನ್ನಿಂದ ನನಗೆ ತಲೆತಗ್ಗಿಸುವಂತಾಗಿದೆ

ಯುವಕ—ಸ್ವಾಮಿಾ! ಆ ಸುದ್ದಿಗಳೆಲ್ಲವೂ ಸುಳ್ಳಿನ ಮುದ್ದೆಗಳು ಇವುಗಳನ್ನು ಕಟ್ಟಿಕೊಂಡು ಕೊರಗುತ್ತಾ ಕುಳಿತರೆ, ನಾವು ಬದುಕಿದಂತೆಯೇ ಸರಿ 'ಜನರನ್ನು ಮೆಚ್ಚಿಸುವುದು ಜನಾರ್ದನನಿಗೂ ನಾಧ್ಯವಿಲ್ಲ' ಎಂದು ಗಾದೆಯು ಹುಟ್ಟಿರುವುದು

ಸುಳ್ಳಲ್ಲ ನಾವು ಹೇಗಿದ್ದರೂ ಜನರು ಆಡಿಕೊಳ್ಳುವರು—ಎಂದ ಮೇಲೆ, ನಾವು ನಮ್ಮ ಅಂತರಾತ್ಮನಿಗೆ ಅಂಜಿ ನಡೆದುಕೊಳ್ಳುವುದೊಂದೇ ಸುಗಮವಾದ ಮಾರ್ಗವು ನನ್ನ ಪೂರ್ವವೃತ್ತಾಂತವು ನನಗೆ ಸಂಬಂಧಪಟ್ಟುದು ಅದನ್ನು ನಾನು ಬಹಿರಂಗಪಡಿಸಲಿಲ್ಲವೆಂದರೆ, ಜನರು ಮನಬಂದಂತೆ ಮಾತನಾಡಿಕೊಳ್ಳುವುದು ಅದಾವ ಧರ್ಮವೋ ನಾನು ಕಾಣೆನು ತಮ್ಮಂತಹ ದೊಡ್ಡವರು ಇಂಥವುಗಳನ್ನು ಮನಸ್ಸಿಗೆ ತಂದುಕೊಳ್ಳಬಾರದು ನಾನು ನನ್ನ ಜನ್ಮದಲ್ಲಿ ಆರಿಗೂ ಆವ ಅಪರಾಧವನ್ನೂ ಮಾಡಿದವನಲ್ಲ ನಾನು ಎರಡು ವರ್ಷಗಳಿಂದಲೂ ತಮ್ಮ ಸೇವೆಯಲ್ಲಿರುವುದನ್ನು ತಾವು ಕಣ್ಣಾರೆ ನೋಡೋಣವಾಗಿದೆ ತಮಗೆ ತಿಳಿದ ಹಾಗೆ ನನ್ನಲ್ಲಿ ದೋಷವೇನಾದರೂ ಇರುವುದಾದರೆ, ನಾನು ಅದನ್ನು ಮುಂದಕ್ಕೆ ತಿದ್ದಿ ಸರಿಪಡಿಸಿಕೊಳ್ಳುವೆನು

ಯಜ—ಮಧುಮಾಧವ! ಇದಾವುದೂ ನನಗೆ ತೃಪ್ತಿಯನ್ನುಂಟುಮಾಡಲಾರದು ಈ ತಿಂಗಳ ಕೊನೆಯ ವರೆಗೂ ನಿನಗೆ ಅವಕಾಶವನ್ನು ಕೊಟ್ಟಿರುವೆನು ಬಳಿಕ ನೀನು ಮತ್ತೆಲ್ಲಿಯಾದರೂ ಹೋಗಿ ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳು.

ಯುವಕ — ನನ್ನ ಕೆಲಸದಲ್ಲಿ ತಾವು ತೃಪ್ತರಾಗಿ ನನ್ನನ್ನು ಈ ರೀತಿಯಾಗಿ ನಿವೃತ್ತನನ್ನಾಗಿ ಮಾಡುವುದು ಯುಕ್ತಿಸಂಗತವಾಗಿಲ್ಲ ಇದನ್ನು ನೋಡಿದರೆ ನನಗೆ ಆಶ್ಚರ್ಯವೇ ಉಂಟಾಗುತ್ತಿರುವುದು ಕರ್ತವ್ಯವನ್ನು ತೃಪ್ತಿಕರವಾಗಿ ನೆರವೇರಿಸತಕ್ಕವನಿಗೆ ತಮ್ಮಿಂದ ಸರಿಯಾದ ಪ್ರತಿಫಲವೇ ದೊರೆತಂತಾದುದು ನನ್ನ ದುರದೃಷ್ಟಕ್ಕೆ ಆರೇನ ಮಾಡಬಲ್ಲರು?

ಯಜ—ಮಧು ! ನಿನ್ನನ್ನು ಕರ್ತವ್ಯಭ್ರಷ್ಟನೆಂದು ನಾನು ಎಂದಿಗೂ ಹೇಳತಕ್ಕವನಲ್ಲ ನಾನು ಆತ್ಮರಕ್ಷಣೆಗಾಗಿ ಈ ರೀತಿಯಲ್ಲಿ ವರ್ತಿಸಬೇಕಾಗಿರುವುದು ನಿನ್ನನ್ನು ಕಂಡರೆ ನನಗೆ ಎಷ್ಟೋ ಸಂಕಟವಾಗುವುದು ; ಆದರೆ ನಾನು ಲೋಕಾಪವಾದಕ್ಕೆ ಹೆದರಿ ನಡೆಯಬೇಕಾಗಿರುವುದು ಈಗ ನೀನು ಇನ್ನೂ ಹುಡುಗ ನಾಗಿರುವುದರಿಂದ, ರಾಜನಗರಕ್ಕೆ ಹೋಗಿ ಎಲ್ಲಿಯಾದರೂ ಕೆಲಸ ವನ್ನು ಸಂಪಾದಿಸಿಕೊಳ್ಳು ದೊಡ್ಡ ನಗರಗಳಲ್ಲಿ ಲೋಕಾಪವಾದದ ಭೀತಿಯಿರುವುದಿಲ್ಲ ನೀನು ಯೋಗ್ಯನೂ, ಕಾರ್ಯದಕ್ಷನೂ, ನಂಬು ಗೆಗೆ ತಕ್ಕವನೂ, ಎಲ್ಲರ ಪ್ರೀತಿಗೂ ಪಾತ್ರನೂ ಆಗಿರುವೆ ಇದಕ್ಕಾಗಿ ನಾನು ತುಂಬಾ ಸಂತೋಷಪಡುವೆನು ಆದರೆ ಲೋಕಾಪವಾದ ದಿಂದ ಇವೆಲ್ಲವೂ ನಿನ್ನಲ್ಲಿ ಫಲಿಸದೇ ಹೋಗುವುದಕ್ಕಾಗಿ ನಾನು ತುಂಬಾ ವ್ಯಸನಪಡಬೇಕಾಗಿರುವುದು

ಯುವಕ—ಯೋಗೆ ನಾರಾಯಣ ಮಹಾಶಯ ! ತಮ್ಮ ಅಭಿಪ್ರಾಯಕ್ಕಾಗಿ ನಾನು ತುಂಬಾ ಸಂತೋಷಪಡುವೆನು ನನ್ನ ಹಣೆಯಲ್ಲಿ ಏನು ಬರೆದಿರುವುದೋ ಅದು ಫಲಿಸಿಯೇ ಹೋಗಲಿ ನಾನು ನನ್ನ ಕೆಲಸಕ್ಕೆ ಈಗಳೆಯೇ ರಾಜೀನಾಮೆಯನ್ನು ಕೊಟ್ಟು ತೆರಳುವೆನು

ಯಜ—ಮಧು ! ನಾನು ನಿನ್ನನ್ನು ಬಿಟ್ಟುಕೊಡುವುದಕ್ಕೆ ಇಷ್ಟವಿಲ್ಲದವನಾಗಿದ್ದರೂ, ನನ್ನ ಇಷ್ಟಕ್ಕೆ ವಿರೋಧವಾಗಿಯಾದರೂ ನಿನ್ನನ್ನು ಬಿಡಬೇಕಾಗಿರುವುದು ಇದರಿಂದ ನೀನು ನನ್ನಲ್ಲಿ ಕಿಂಚಿ ತ್ತಾದರೂ ಆಗ್ರಹ ಮಾಡಬೇಡ. ದೇವರು ನಿನಗೆ ಮುಂದಕ್ಕೆ ಒಳ್ಳೆಯದನ್ನೇ ಮಾಡುವನು ನಾನು ನಿನಗ ಒಳ್ಳೆಯದನ್ನು ಮಾಡಿ, ಆ ಸುಖವನ್ನು ಅನುಭವಿಸುವುದಕ್ಕೆ ನನ್ನ ಹಣೆಯಲ್ಲಿ ಬರೆಯಲಿಲ್ಲ

ಎಲ್ಲಿಯಾದರೂ ಸುಖದಿಂದ ಬಾಳಿ ಬದುಕಿ ಹೆಸರನ್ನು ಪಡೆದು ಕೊಳ್ಳು ಮಧುಮಾಧವ! ನಿನ್ನ ರಾಜೀನಾಮೆಯನ್ನು ನಾನು ಅಂಗೀಕರಿಸಿರುವೆನು. ಇನ್ನು ನೀನು ತೆರಳಬಹುದು

ಮಧುಮಾಧವನು ಈ ರೀತಿಯಾದ ಅವನಿಂದೆಗಾಗಿ ತನ್ನನ್ನು ತಾನು ಎಷ್ಟೋ ನಿಂದಿಸಿಕೊಂಡನು. ಆವನೋ ಗೂಢಶತ್ರುವು ತನ್ನ ಬೆನ್ನ ಹತ್ತಿರುವುದಕ್ಕಾಗಿ, ಆತನಿಗುಂಟಾದ ದುಃಖವನ್ನು ಹೇಳಿ ತೀರದು ಆತನು ದುಃಖಿಸಿದುದು ಈ ರೀತಿಯಾಗಿದ್ದಿತು·—

" ನಾನು ಎರಡು ವರ್ಷಗಳಿಂದಲೂ ಆವ ಬಾಧೆಯೂ ಇಲ್ಲದೆ ಸುಖವಾಗಿದ್ದುಕೊಂಡಿದ್ದೆನು ನನ್ನ ಗೂಢಶತ್ರುವು ಇಲ್ಲಿಗೂ ಬಂದು ನನ್ನನ್ನು ಪೀಡಿಸುವುದಕ್ಕೆ ಮೊದಲು ಮಾಡಿದಂತಿದೆ ಈತನ ನಿರಾಧಾರವಾದ ಅಪವಾದದಿಂದಲೇ ನಾನು ಇದ್ದ ಕೆಲಸವನ್ನು ಬಿಟ್ಟು ಬೀದಿಯ ಬಿಕಾರಿಯಾಗಬೇಕಾಯಿತು ನಾನು ಕೆಲಸವನ್ನು ಬಿಟ್ಟುದರಿಂದ, ನನ್ನ ಅಪವಾದವು ಸತ್ಯವಾದುದೆಂದು ಜನರು ಊಹಿಸುವುದಕ್ಕೂ ಸಾಕು. ಜನರ ಸ್ವಭಾವವನ್ನು ಏನೆಂದು ಹೇಳಲಿ? ಹತ್ತಾರು ಜನರು ಹೊಗಳಿದರೆ, ಎಲ್ಲರೂ ಹೊಗಳುವರು; ಹತ್ತಾರು ಜನರು ಬಗುಳಿದರೆ ಎಲ್ಲರೂ ಬಗುಳುವರು ಕಾರಣವನ್ನು ವಿಚಾರಿಸುವುದಕ್ಕೆ ಆರಿಗೆ ತಾನೇ ಶ್ರದ್ಧೆಯಿರುವುದು?"

ಬಲು ಮಾತಿನಿಂದೇನು? ಮಧುಮಾಧವನಿಗೆ ಜೀವಕ್ಕೆ ಜೇರಿಗೆ ಆರೆಯುವ ಗೂಢಶತ್ರುವೊಬ್ಬನು ಹುಟ್ಟಿಕೊಂಡು, ಅವನ ಸರ್ವನಾಶಕ್ಕೆ ಸೊಂಟಕಟ್ಟಿ ನಿಂತನು. ಮಧುಮಾಧವನು ಆವುದೋ ಒಂದು ಯುಕ್ತಿಯನ್ನವಲಂಬಿಸಿ ವಿಲಾಸಪುರಕ್ಕೆ ಬಂದು ಶತ್ರುವಿನ ಕಣ್ಣಿಗೆ ಮಣ್ಣು ತೂರಿದ್ದನು. ಆ ಯುಕ್ತಿಯು ಎರಡು ವರ್ಷಕಾಲ

ಫಲಿಸಿತು ಆ ಗೂಢಶತ್ರುವು ಈ ಗುಟ್ಟನ್ನು ಹೇಗೋ ಅರಿತುಕೊಂಡು ವಿಲಾಸಪುರಕ್ಕೆ ಬಂದು ಮತ್ತೆ ಕಾಡಿಸುವುದಕ್ಕೆ ಮೊದಲು ಮಾಡಿದನು ಮಧುಮಾಧವನಿಗೆ ತನ್ನ ಗೂಢಶತ್ರುವು ಆರೆಂಬುದು ಗೊತ್ತಾಗಿದ್ದಿದ್ದರೆ, ಆ ಮಾರ್ಗವೇ ಬೇರೆಯಾಗಿರುತ್ತಿದ್ದಿತು ಅಯ್ಯೋ ಪಾಪ! ಮಧುಮಾಧವನು ಇದನ್ನು ಅರಿಯಲಾರದವನಾಗಿ ದಿಕ್ಕು ತೋರದೆ ಪೇಚಾಡಿ ಹೋದನು

ಧೀರನಾದವನು ವಿಪತ್ತಿಗೆ ಅಂಜುವುದೂ ಇಲ್ಲ, ಹೇಡಿಯಂತೆ ಪ್ರಾಣಬಿಡುವುದೂ ಇಲ್ಲ ನಮ್ಮ ಕಥಾನಾಯಕನಾದ ಮಧುಮಾಧವನು "ಬಂದುದೆಲ್ಲಾ ಬರಲಿ, ಭಗವಂತನ ದಯೆಯೊಂದಿರಲಿ" ಎಂದು ತನ್ನ ಇಷ್ಟದೇವತೆಯ ಮೇಲೆ ಭಾರಹಾಕಿ, ಗೂಢ ಶತ್ರುವನ್ನು ನಿಗ್ರಹಿಸುವುದಕ್ಕೆ ಶಕ್ತಿನಾಲದವನಾಗಿ, ಆತನಿಗೆ ಗೋಚರಿಸದಂತೆ ಎಲ್ಲಿಗಾದರೂ ದೂರವಾಗಿ ಓಡಿಹೋಗಿ ತಲೆಯನ್ನು ತಪ್ಪಿಸಿಕೊಂಡು ಬದುಕಬೇಕೆಂದು ಸಂಕಲ್ಪಮಾಡಿಕೊಂಡನು ಬಳಿಕ ತನ್ನ ಉದ್ದೇಶವು ನಾಂಗವಾಗಿ ನೆರವೇರುವುದಕ್ಕೋಸ್ಕರ ತನ್ನ ರೂಪವನ್ನು ಮಾರ್ಪಡಿಸಿಕೊಳ್ಳುವುದಕ್ಕೆ ಬೇಕುಬೇಕಾದ ನಾಮಗ್ರಿಗಳನ್ನು ಒಂದೊಂದಾಗಿ ಸಂಗ್ರಹಿಸಿಟ್ಟುಕೊಂಡನು ಎಲ್ಲವೂ ಸಿದ್ಧವಾದ ಮೇಲೆ, ಆರಿಗೂ ತಿಳಿಸದ ಹಾಗೆ ವಿಲಾಸಪುರವನ್ನು ಒಂದೇ ತಡವೆಗೆ ತ್ಯಾಗಮಾಡಿ ಹೊರಟುಹೋಗಬೇಕೆಂದು ಸಮಯವನ್ನು ನಿರೀಕ್ಷಿಸುತ್ತಿರುವಷ್ಟರೊಳಗಾಗಿ, ದುರ್ಯೋಗದಿಂದ ಅದೊಂದು ದುರ್ಘಟನೆಯು ಒದಗಿಬಂದು ಅವನ ಉದ್ದೇಶವನ್ನೇ ನಾಶಮಾಡಿಬಿಟ್ಟಿತು

ಮಧುಮಾಧವನು ಆವ ರಾತ್ರಿಯಲ್ಲಿ ವಿಲಾಸಪುರವನ್ನು ಬಿಟ್ಟು ಹೊರಟನೋ, ಅದೇ ರಾತ್ರಿಯಲ್ಲ ಯೋಗ ನಾರಾಯಣ

ದಾಸನ ಕೋರಿಗೆ ಬೆಂಕಿಬಿದ್ದು ಒಳಗಿದ್ದ ಬೆಲೆಬಾಳುವ ಸಾಮಗ್ರಿಗಳೆಲ್ಲವೂ ಸುಟ್ಟು ಬೂದಿಯಾದುದು ಮಾತ್ರವಲ್ಲದೆ, ಕೋರಿಯ ಕಬ್ಬಿಣದ ಪೆಟ್ಟಿಗೆಯಲ್ಲಿದ್ದ ಎರಡು ಲಕ್ಷ ರೂಪಾಯಿಗಳೂ ಕಳುವಾದುವು ಬೆಂಕಿಬಿದ್ದುದು ಆಕಸ್ಮಿಕವೆನ್ನೋಣವೆಂದರೆ, ಕಳ್ಳತನವೂ ಅದರ ಸಮಸಮಯದಲ್ಲಿಯೇ ನಡೆದಿರುವುದು ಕಳ್ಳನಾದವನು ವಸ್ತು ದ್ರವ್ಯಗಳನ್ನು ಕದಿಯುವುದಕ್ಕೆ ಬರುವನೇ ಹೊರತು ಬೆಂಕಿ ಹಾಕಿ ಹೋಗುವುದಕ್ಕೆ ಪ್ರಾಯಿಕವಾಗಿ ಬರುವುದಿಲ್ಲ ಹೀಗೆಂದ ಮೇಲೆ ಬೆಂಕಿಬಿದ್ದುದಕ್ಕೆ ಕಾರಣವೇನಿರಬಹುದು? ಆರಾದರೂ ಉದ್ದೇಶ ಪೂರ್ವಕವಾಗಿ ಬೆಂಕಿಯನ್ನು ಹಾಕಿರುವರೇ—ಇಲ್ಲವೇ, ಬೆಂಕಿಯು ಅಕಸ್ಮಾತ್ತಾಗಿ ಬಿದ್ದುದಾಗಿರುವುದೇ?

ಕೆಲವು ಕಾಲದ ಹಿಂದೆ ಮತ್ತೊಬ್ಬ ದೊಡ್ಡ ಕೋರಿಯವನು ತನ್ನ ಕೋರಿಯನ್ನು ಯೋಗೆ ನಾರಾಯಣದಾಸನಿಗೆ ಆಧಾರಮಾಡಿ ೨,೦೦,೦೦೦ ರೂಪಾಯಿಗಳ ಸಾಲವನ್ನು ಪಡೆದುಕೊಂಡಿದ್ದು, ಈ ಕೃತ್ಯ ನಡೆದ ಒಂದು ದಿನದ ಹಿಂದೆ ತನ್ನ ಸಾಲದ ಮೊಬಲಗೆಲ್ಲವನ್ನೂ ಒಂದೇ ಮೊತ್ತದಲ್ಲಿ ತಂದು ಯೋಗೆ ನಾರಾಯಣನಿಗೆ ಕೊಟ್ಟುಬಿಟ್ಟನು ಯೋಗೆ ಮಹಾಶಯನು ಆ ಮೊಬಲಗನ್ನು ತನ್ನ ಕಬ್ಬಿಣದ ಪಟ್ಟಿಗೆಯಲ್ಲಿ ಭದ್ರಪಡಿಸಿಟ್ಟಿದ್ದನು ಇದನ್ನು ಕೋರಿಯ ನೌಕರರು ಬಲ್ಲವರಾಗಿದ್ದರು

ಸ್ಥಿತಿಗತಿಗಳು ಹೀಗಿರುವಲ್ಲಿ, ಕೃತ್ಯವು ಉದ್ದೇಶಪೂರ್ವಕವಾಗಿ ನಡೆದಿದೆಯೇ—ಇಲ್ಲವೆ, ಆಕಸ್ಮಿಕವಾಗಿ ಸಂಭವಿಸಿರುವುದೇ? ಬೆಂಕಿಬಿದ್ದುದು ಆಕಸ್ಮಿಕವೆಂದು ಹೇಳುವುದಾದರೂ, ಕಳ್ಳತನವು ಉದ್ದೇಶಪೂರ್ವಕವೆಂದೇ ಹೇಳಬೇಕಾಗುವುದು. ಈ ಯುದ್ದೇಶವಾದರೂ ಆರದಿರಬಹುದು? ನೌಕರರದೇ—ಇಲ್ಲವೆ, ನಿಜವಾದ

ಕಳ್ಳನದೇ? ಹೊರಗಣ ನಿಜವಾದ ಕಳ್ಳನಿಗೆ ಇಂದೇ ಕಬ್ಬಿಣದ ಪೆಟ್ಟಿಗೆಯಲ್ಲಿ ಧನದ ರಾಶಿಯಿರುವುದೆಂದು ಹೇಗೆ ಗೊತ್ತಾಗಬೇಕು? ಹಾಗಾದರೆ ನೌಕರರೇ ಈ ಕೆಲಸವನ್ನು ಮಾಡಿರಬೇಕೆನ್ನುವುದಾದರೆ, ಅವರಲ್ಲಿ ಆಪಾತನು ಈ ಕಾರ್ಯದಲ್ಲಿ ಮುಂದು ಪರಿದು ಬಂದಿರುವನು? ಪ್ರಕೃತ ಸಂದರ್ಭದಲ್ಲಿ ಆರಿಗ ಕೋರಿಯಿಂದ ಉಚ್ಚಾಟನೆಯಾದುದೋ ಆತನೇ ಹಣವೆಲ್ಲವನ್ನೂ ಸಂಗ್ರಹಿಸಿಟ್ಟುಕೊಂಡು, ತನ್ನನ್ನು ಕೆಲಸದಿಂದ ನಿವೃತ್ತನನ್ನಾಗಿ ಮಾಡಿದರೆಂಬ ಹೊಟ್ಟೆಯ ಕಿಚ್ಚಿನಿಂದ ಕೋರಿಗೆ ಬೆಂಕಿಯನ್ನು ಹಾಕಿ ಹೊರಟುಹೋಗಿರಬೇಕೆಂದು ಆರು ಬೇಕಾದರೂ ಊಹಿಸಬಹುದಾಗಿದ್ದಿತು ಈ ಊಹೆಯ ಬಲದಿಂದಲೇ ಈಯಪರಾಧವು ಮಧುಮಾಧವನ ಮೇಲೆ ಒರಗಿಸಲ್ಪಟ್ಟಿತು

ಕೃತ್ಯ ನಡದ ಕೂಡಲೆ, ಯೋಗನಾರಾಯಣನು ರಾಜನಗರದ ಮಾತ್ರಸ್ಥಾನಕ್ಕೆ ಪತ್ರ ಬರದು ಪತ್ತೇದಾರರನ್ನು ಬರಮಾಡಿಕೊಂಡು, ಅಪರಾಧಿಯ ಅನ್ವೇಷಣದ ಕಾರ್ಯಭಾರವನ್ನು ಅವರ ಮೇಲೆ ಒಪ್ಪಿಸಿದನು ಪತ್ತೇದಾರರು ಮಧುಮಾಧವನ ಮೇಲೆ ಸಂಶಯಪಟ್ಟವರಾಗಿ ಮೊತ್ತಮೊದಲು ಆತನಿದ್ದ ಸ್ಥಲಕ್ಕೆ ಹೋಗಿ ನೋಡಿದರು ಆತನು ಹಿಂದಣ ರಾತ್ರಿಯಲ್ಲಿಯೇ ವಿಲಾಸಪುರವನ್ನು ಒಂದೇ ತಡವೆಗೆ ತ್ಯಾಗಮಾಡಿ ಹೊರಟುಹೋದನೆಂದು ಗೊತ್ತಾಯಿತು ಇದರಿಂದ ಸಂಶಯವು ಹೆಚ್ಚಿ, ಪತ್ತೇದಾರರು ಮಧುಮಾಧವನ ವಿಷಯದಲ್ಲಿ ತೆರತೆರನಾಗಿ ಕಂಡಕಂಡೆಡೆಗಳಲ್ಲೆಲ್ಲಾ ಜಿಜ್ಞಾಸಮಾಡಲಾಗಿ, "ಮಧುಮಾಧವನು ತನ್ನ ವೇಷವನ್ನು ಮಾರ್ಪಡಿಸಿಕೊಳ್ಳುವುದಕ್ಕಾಗಿ ಕೆಲವು ದಿನಗಳಿಂದಲೂ ಗೋಪ್ಯವಾದ ರೀತಿಯಿಂದ ಅನೇಕ ಸಾಮಗ್ರಿಗಳನ್ನು ಕೊಳ್ಳುತ್ತಿದ್ದನು"

ಎಂಬ ಸುದ್ದಿಯು ಬಯಲಾಯಿತು ಪತ್ತೇದಾರರು ಇನ್ನು ಸಂಶಯ ಪಡುವುದಕ್ಕೆ ಕಾರಣವಿಲ್ಲದೆ, ಮಧುಮಾಧವನೇ ಈ ಕೆಲಸವನ್ನು ಮಾಡಿ ಓಡಿ ಹೋಗಿರುವನೆಂದು ಸಿದ್ಧಾಂತಮಾಡಿಕೊಂಡರು.

ಕ್ಷುದ್ರವನ್ನು ಹೇಳುವುದೇ ಸ್ವಭಾವವಾಗಿಯುಳ್ಳ ಕೆಲವು ಜನ ದುಷ್ಟರು, ಕಬ್ಬಿಣದ ಪೆಟ್ಟಿಗೆಯಲ್ಲಿ ಹಣವಿದ್ದುದು ಮಧು ಮಾಧವನಿಗೆ ಚೆನ್ನಾಗಿಯೂ ಗೊತ್ತಿದ್ದಿತೆಂದೂ, ಬೆಂಕಿ ಬಿದ್ದ ರಾತ್ರಿ ಯಲ್ಲಿ ಆತನು ಕೋರಿಯ ಬಳಿಯಲ್ಲಿ ಒಂದೆರಡು ತಡವೆ ಕಾಣಿಸಿ ಕೊಂಡನೆಂದೂ, ಕೆಲಸದಿಂದ ನಿವೃತ್ತನಾದ ಮೇಲೆ, ಆತನ ಮುಖ ದಲ್ಲಿ ಪ್ರತೀಕಾರದ ಕಳೆಯಿದ್ದಿತೆಂದೂ, ಆತನು ಒಳ್ಳೆಯವನಂತೆ ನಟಿಸುತ್ತಿದ್ದುದು ಸಮಯವರಿತು ಈ ಕೆಲಸವನ್ನು ಮಾಡುವು ದಕ್ಕೆಂದೂ, ಇನ್ನೂ ಏನೇನೋ ಕಾರಣಗಳನ್ನು ತಮಗೆ ತೋರಿ ಬಂದಂತೆ ವಿಲಾಸಪುರದಲ್ಲಿ ಹರಡುವುದಕ್ಕೆ ಮೊದಲು ಮಾಡಿದರು.

ಲೋಕದಲ್ಲಿ ದುಷ್ಟರನ್ನು ಕೆಟ್ಟವರೆಂದು ಅನೇಕರು ಹಳಿಯು ವರು. ಅವರಂತಹ ಲೋಕೋಪಕಾರಿಗಳು ಮತ್ತಾರೂ ದೊರೆಯ ಲಾರರೆಂದು ನಮ್ಮ ಅಭಿಪ್ರಾಯವು ತತ್ತ್ವಜ್ಞರು, ಮತ್ತೊಂದು ಲೋಹದ ಸಂಸರ್ಗದಿಂದುಂಟಾದ ಕಶ್ಮಲವನ್ನು ಬೇರ್ಪಡಿಸು ವುದಕ್ಕಾಗಿ ಬಂಗಾರವನ್ನು ಪುಟಹಾಕುವರು ಅದರಂತೆಯೇ ದುಷ್ಟರೆಂಬ ತತ್ತ್ವವೇತ್ತಾರರು ಮನುಷ್ಯನಲ್ಲಿನ ದೋಷಗಳನ್ನು ಹೊರಗೆ ಹಾಕಿ ನೈಜವಾದ ಗುಣಗಳನ್ನು ತಾನೇ ತಾನಾಗಿ ಪ್ರಕಾ ಶಿಸುವಂತೆ ಮಾಡುವರು ಆದುದರಿಂದ ದೋಷಜ್ಞರನ್ನು ದುಷ್ಟರೆಂದು ಕರೆವುದು, ಕರೆಯುವವರ ದುಷ್ಟತೆಯನ್ನು ಹೊರಹಾಕುವುದು. ಹೇ ಮಾನವ ಮಹಾಶಯ! ದೋಷಗಳಿರುವುದರಿಂದಲೇ ಗುಣಗಳಿಗೆ

ಅಷ್ಟು ಪ್ರಾಶಸ್ತ್ಯ ಬಂದಿರುವುದು. ದೋಷಗಳೆಂಬುದೇ ಇಲ್ಲದಿದ್ದರೆ, ಗುಣಗಳನ್ನು ಕೇಳುವವರಾರೂ ಇರುತ್ತಿರಲಿಲ್ಲ

ಲೋಕದಲ್ಲಿ ಬಗೆಬಗೆಯಾಗಿ ಕಾಣಬರುವ ನಾಮರೂಪ ಗಳೆಲ್ಲವೂ ದೋಷದ ಪರಿಣಾಮವೇ ಆಗಿರುವುದರಿಂದ, ದೋಷ ವನ್ನು ಆಡಿಕೊಂಡರೆ ನೀವು ಕುಗ್ಗಿ ಹೋಗುವುದೇತಕೆ? ಗುಣಗಳ ಹೊಗಳಿಕೆಯಿಂದ ನೀವು ಹಿಗ್ಗಿ ಹೋಗುವುದೇಕೆ? ಗುಣದಿಂದ ಸಂತೋಷಪಡದೆಯೂ ದೋಷದಿಂದ ದುಃಖಪಡದೆಯೂ ಇರುವ ಮಾನವನೊಬ್ಬನೇ ನಿಜವಾದ ಸುಖಿಯೆಂದು ನಮ್ಮ ನಂಬುಗೆಯು.

ಪತ್ತೇದಾರರು ಜನರಾಡುವ ಮಾತುಗಳೆಲ್ಲವನ್ನೂ ಕೇಳಿ ಮಧುಮಾಧವನ ಲಕ್ಷಣಗಳನ್ನು ಚೆನ್ನಾಗಿಯೂ ಅರಿತುಕೊಂಡವ ರಾಗಿ ಆತನನ್ನು ಬೆನ್ನಟ್ಟಿದರು

ಮಧುಮಾಧವನು ಈ ದುರ್ಘಟನಾವಿಶೇಷವನ್ನು ಕೊಂಚ ವಾದರೂ ಅರಿಯದವನಾಗಿ ತೆರಳಿರುವನು. ಆತನು ತನ್ನ ಗೂಢ ಶತ್ರುವಿನ ಕಣ್ಣಿಗೆ ಮಣ್ಣೆರಚಬೇಕೆಂದು ವೇಷವನ್ನು ಮಾರ್ಪಡಿಸಿ ಕೊಂಡು ಏಲಾಸಪುರವನ್ನು ತ್ಯಾಗಮಾಡಿ ಹೊರಟನೇ ಹೊರತು, ಜನರಾಡಿಕೊಂಡ ಅಪರಾಧಕ್ಕೆ ಅಂಜಿ ಓಡಿಹೋದವನಲ್ಲ. ಇದರ ತತ್ತ್ವವು ನಮಗೆ ಗೊತ್ತಿದ್ದರೂ ಪತ್ತೇದಾರರಿಗೆ ಗೊತ್ತಾಗುವ ಬಗೆ ಹೇಗೆ? ಕಾಲಕರ್ಮಸಂಯೋಗದಿಂದ ಆವುದಕ್ಕೋ ಕಾರಣ ವಾದದು ಮತ್ತಾವುದಕ್ಕೋ ಕಾರಣವಾಗಿ ಪರಿಣಮಿಸುವುದೆನ್ನು ವುದಕ್ಕೆ ನಮ್ಮ ಕಥಾನಾಯಕನೇ ಸಾಕಾದಷ್ಟು ನಿದರ್ಶನವಾಗಿರು ವನು. ಗೂಢ ಶತ್ರುವಿನ ಸುಳ್ಳಿನ ಸುದ್ದಿಯೆನಿಸಿದ ಲೋಕಾಪ ವಾದದಿಂದ ಮುಕ್ತನಾಗಿ ಬಾಳಬೇಕೆಂದು ಬಯಸಿದ ಮಧುಮಾ

ಧವನಿಗೆ ಕಳ್ಳತನದ ಹಾಗೂ ಅಗ್ನಿದಾಹದ ಅಪರಾಧವು ಕಲ್ಪಿಸಲ್ಪಡ ಬೇಕಾದರೆ, ಆತನ ಪ್ರಾಚೀನ ಕರ್ಮದ ದುಷ್ಪರಿಣಾಮವನ್ನು ಎಷ್ಟೆಂದು ವರ್ಣಿಸುವುದಕ್ಕಾದೀತು? ದೈವ ಬಲವು ದುರ್ಬಲ ವಾಗುವುದಾಗಿದ್ದರೆ, ಮಿತ್ರರು ಶತ್ರುಗಳಾಗಿಯೂ, ಅಮೃತವು ವಿಷವಾಗಿಯೂ, ಧರ್ಮವು ಅಧರ್ಮವಾಗಿಯೂ, ಗುಣವೆಲ್ಲವೂ ದೋಷವಾಗಿಯೂ ಪರಿಣಮಿಸುವುದು ಸಹಜವಾಗಿಯೇ ಇರುವುದು

ನಮ್ಮ ಮಧುಮಾಧವನು ಅಂತಹ ದುರ್ಯೋಗಕ್ಕೆ ಪಕ್ಕಾ ದುದರಿಂದಲೇ, ಕೆಲಸವನ್ನು ಕಳೆದುಕೊಂಡು ಕೆಟ್ಟಹೆಸರಿಗೆ ಈಡಾ ದನು ಆತನ ದುರ್ಯೋಗದಿಂದಲೇ, ಯಜಮಾನನ ಕೋರಿಗೆ ಬೆಂಕಿ ಬಿದ್ದು, ಆತನ ಕಬ್ಬಿಣದ ಪೆಟ್ಟಿಗೆಯಲ್ಲಿದ್ದ ಅಪಾರ ಸಂಪತ್ತೂ ಕಳವಾದುದು.

ಪ್ರಿಯಪಾಠಕ ಮಹಾಶಯ! ಪ್ರಕೃತಿನಿಯಮವು ಹೀಗಿರು ವಲ್ಲಿ, ನಮ್ಮ ಎಚ್ಚರಿಕೆಯೇನೂ ಪ್ರಯೋಜನಕ್ಕೆ ಬರಲಾರದು. ನಮ್ಮಗಳ ಕರ್ತವ್ಯವೇನೆಂದರೆ—ಕಷ್ಟಬಂದಾಗ ನಾವು ಎದೆಗೆಡ ಬಾರದು; ಒಳ್ಳೆಯದು ಬಂದಾಗ ನಾವು ಅದರ ಫಲವನ್ನು ಅನು ಭವಿಸುವುದಕ್ಕೆ ಹೇಗೆ ಸಿದ್ಧರಾಗಿ ಮುಂದೆ ಬಂದು ನಿಲ್ಲುವೆವೋ, ಹಾಗೆಯೇ ಕೆಟ್ಟದು ಬಂದಾಗಲೂ ಹೆದರದೆ ಶಾಂತತೆಯಿಂದ ಅದನ್ನು ಇದಿರಿಸಿ ನಿಲ್ಲುವುದಾದರೆ, ಭಗವಂತನ ದಯೆಯಿಂದ ವಿಪತ್ತು ಪರಿಹಾರವಾದರೂ ಆಗಬಹುದು

## ಎರಡನೆಯ ವಿಲಾಸ

### ಪ್ರೇಮ ಬೀಜಾಂಕುರ

ಮಧುಮಾಧವನು ವಿಲಾಸಪುರವನ್ನು ತ್ಯಾಗಮಾಡುವ ಕಾಲದಲ್ಲಿ ತನ್ನಲ್ಲಿದ್ದ ವಸ್ತುಗಳೆಲ್ಲವನ್ನೂ ಬಡವನಾದ ಸಹಜ ಮಿತ್ರನೊಬ್ಬನಿಗೆ ಒಪ್ಪಿಸಿ ವೇಷಪರಿವರ್ತನೆಯಿಂದ ಅರ್ಧರಾತ್ರಿ ಸಮಯಕ್ಕೆ ಮುಂಚಿತವಾಗಿಯೇ ತೆರಳಿದನು ಸರಿಯಾದ ಮಾರ್ಗವನ್ನು ಹಿಡಿದು ಹೊರಡುವುದಾದರೆ, ತನ್ನ ಗೂಢ ಶತ್ರುವಿಗೆ ಸುಳಿವು ಗೊತ್ತಾಗಬಹುದೆಂದೆಣಿಸಿ, ಮಧುಮಾಧವನು ಕಾಡು ಮೇಡುಗಳ ಕಾಲ ದಾರಿಯನ್ನು ಅವಲಂಬಿಸಿದನು. ಆತನು ಚಂದ್ರನ ಅಸ್ಫುಟವಾದ ಬೆಳಕಿನಲ್ಲಿ ತಪ್ಪುಹಜ್ಜೆಗಳನ್ನಿಡುತ್ತಾ ಬೆಳಗಾಗುವುದರೊಳಗಾಗಿ ೧೫ ಮೈಲಿಗಳ ದಾರಿಯನ್ನು ನಾಗಿ, ರಾಯನ ಪೇಟೆಯೆಂಬ ಗ್ರಾಮಕ್ಕೆ ಬಂದು ಅಲ್ಲಿ ಒಬ್ಬ ಅಡುಗೂಳಜ್ಜಿಯ ಬೀಡಾರದಲ್ಲಿ ಪ್ರಾತರಾಶ (ಪ್ರಾತಃಕಾಲದ ಅಲ್ಪೋಪಹಾರ)ಕ್ಕೆ ನಿಂತನು.

ಮಧುಮಾಧವನು ಬಳಿಕ ಮುಖಮಜ್ಜನಾದಿಗಳನ್ನು ತೀರಿಸಿಕೊಂಡು ಉಪಹಾರಕ್ಕಾಗಿ ಒಂದೆಡೆಯಲ್ಲಿ ಕುಳಿತಿರಲು, ತಳತ್ತಳಿವ ನವತಾರುಣ್ಯದ ಯುವತಿಯೊಬ್ಬಳು ಆತನಿದ್ದಲ್ಲಿಗೆ ಬಂದು— ಏನಪ್ಪಣೆ ? ಎಂದು ಮಧುರಸ್ವರದಿಂದ ಮಾತನಾಡಿಸಿದಳು.

ಮಧುಮಾಧವನು ಆ ಪ್ರಶ್ನೆಗೆ ಆವ ಉತ್ತರವನ್ನೂ ಕೊಡದೆ, ಸರ್ವಾಂಗ ಸುಂದರಿಯಾದ ಆ ಯುವತಿಯ ಶೋಭಾರಾಶಿಯನ್ನು ನೋಡಿ ಭ್ರಾಂತನಾಗಿ ಅಲುಗಾಡದೆಯೇ ಕುಳಿತು ಬಿಟ್ಟನು.

ಪ್ರಶ್ನೆಗೆ ಆವ ಉತ್ತರವೂ ಬಾರದಿರುವುದನ್ನು ನೋಡಿ, ಆ ಸುಂದರಿಯು ಯುವಕನನ್ನು ಕುರಿತು—ಸ್ವಾಮಿ! ದೇಹದಲ್ಲಿ

ಆಲಸ್ಯವೇನಾದರೂ ತೋರಿಬರುತ್ತಿರುವುದೇ? ಎಂದು ಮತ್ತೆ ಪ್ರಶ್ನೆ ಮಾಡಿದಳು.

ಉತ್ತರ—ನನಗೆ ಆಯಾಸದಿಂದ ತುಂಬಾ ಹಸಿವಾಗುತ್ತಿರುವುದು

ಪ್ರಶ್ನೆ—ಹಾಗಾದರೆ ಬೇಕಾದುದನ್ನು ತಿಳಿಸೋಣವಾಗಲಿ; ತಮ್ಮ ಅಪ್ಪಣೆಯಂತೆ ನಡೆಯುವೆನು

ಮಧುಮಾಧವನು ಯುವತಿಯ ಸೌಂದರ್ಯವನ್ನೂ ಮಾತಿನ ಮಾಧುರ್ಯವನ್ನೂ ಮನದಲ್ಲಿ ತಂದುಕೊಂಡವನಾಗಿ, ಈಕೆಯೊಡನೆ ಕೊಂಚ ಹೊತ್ತು ಮಾತನಾಡಿಕೊಂಡಿರುವುದರಿಂದ ತನ್ನ ಮಾರ್ಗಾಯಾಸವೆಲ್ಲವೂ ಪರಿಹಾರವಾದೀತೆಂದು ಭಾವಿಸಿ—ರಮಣೀಮಣಿ! ಈ ದಿನದ ಕಟ್ಟಲೆಯೇನು? ಎಂದನು

ಯುವತಿ—ನಮ್ಮಲ್ಲಿ ಬಿಸಿಬಿಸಿ ದೋಸೆಯುಂಟು; ಅದನ್ನು ಬೆಣ್ಣೆ ಚಟ್ಟಣಿಯೊಡನೆ ಸೇವಿಸಬಹುದು. ಮೃದುಮಧುರವಾದ ಇಡ್ಡಲಿಗೆಗಳು ಸಿದ್ಧವಾಗಿರುವುವು; ಅವಕ್ಕೆ ರುಚಿಯನ್ನು ಹೆಚ್ಚಿಸುವ ರುಚಿರುಚಿಯಾದ ಮೇಲೋಗರವೂ ಉಂಟು ಇಷ್ಟಪಟ್ಟರೆ ರೊಟ್ಟಿಯನ್ನೂ ಸಕ್ಕರೆಯನ್ನೂ ತಂದು ಬಡ್ಡಿಸುವೆನು. ತಮಗೆ ಪಲ್ಯದಲ್ಲಿ ಚಾಪಲ್ಯವಿರುವುದಾದರೆ, ಪೂರೀ ಪಲ್ಯವನ್ನಾದರೂ ತೆಗೆದುಕೊಳ್ಳಬಹುದು ತಾವು ತಮ್ಮಿಷ್ಟವನ್ನು ತೋರ್ಪಡಿಸುವುದಾದರೆ, ನಿಮಿಷಮಾತ್ರದಲ್ಲಿ ಎಲ್ಲವೂ ಸಿದ್ಧವಾಗುವುವು. ತಾವು ಬೇಕಾದುದನ್ನು ಅಪ್ಪಣೆಮಾಡಿ, ಈ ಚರಣದಾಸಿಯಿಂದ ಸೇವೆಯನ್ನು ತೆಗೆದುಕೊಳ್ಳೋಣವಾಗಲಿ.

ಯುವತಿಯು ಈ ರೀತಿಯಾದ ತನ್ನ ಸರ್ವಜನವಶೀಕಾ ವಿದ್ಯೆಯನ್ನು ಬೀರಿ ಸುಮ್ಮನೆ ನಿಂತಿರಲು, ಯುವಕನು ಬೆರಗಾ ಆಕೆಯನ್ನೇ ಎವೆಯಿಕ್ಕದೆ ನೋಡಿದನು. ಆಗ ಆಕೆಯ ಮುಖದ ವಿಷಾದರೇಖೆಯೊಂದು ಕಾಣಿಸಿಕೊಳ್ಳಲು, ಯುವಕನು ಇದ ತತ್ತ್ವವನ್ನು ಅರಿವುದಕ್ಕಾಗಿ—ಸುಂದರಿ! ಇದೇನು, ನೀನು ಬಂದ ನನ್ನ ಅಪ್ಪಣೆಗಾಗಿ ಕಾದಿರುವೆ? ಎಂದು ನುಡಿದನು.

ಯುವತಿ—ಆಗಬಾರದೇತಕೆ, ಮಹಾಶಯ?

ಯುವಕ—ಈ ಅಡುಗೂಳಜ್ಜಿಯು ನಿನಗೇನಾಗಬೇಕು

ಯುವತಿ—ನನಗೆ ಸ್ವಾಮಿನಿಯಾಗಬೇಕು.

ಯುವಕ—ಏನು! ನೀನು ಇಲ್ಲಿ ಕೆಲಸಕ್ಕಿರುವೆಯಾ?

ಯುವತಿ—ಅಹುದು; ಕೆಲಸಕ್ಕಿರುವೆನು.

ಯುವಕ—ಇದೊಂದು ಅಚ್ಚರಿಯ ಸುದ್ದಿಯೇ ಸರಿ.

ಯುವತಿ—ಹಾಗೆಂದರೇನು?

ಯುವಕನು ಸುತ್ತಲೂ ನೋಡಿ ಹತ್ತಿರದಲ್ಲಿ ಆರೂ ಇಲ್ಲದಿರು ವುದನ್ನು ಕಂಡುಕೊಂಡು ಧೈರ್ಯದಿಂದ—ನಿನ್ನನ್ನು ನೋಡಿದರೆ ನೀನು ದಾಸಿಯಾಗಿರುವುದಕ್ಕೆ ತಕ್ಕವಳಲ್ಲವೆಂದು ತೋರುವುದು ಎಂದನು.

ಯುವತಿ—ನಾನು ಇಲ್ಲಿ ದಾಸಿಯಾಗಿರುವೆನು ಈಯಧಿ ಕಾರವು ನನಗೆ ಸಿಕ್ಕಿದುದಕ್ಕಾಗಿ ನಾನೇ ಧನ್ಯೆ

ಯುವಕ—ಲೋಕದಲ್ಲಿ ಪುರುಷನಾಗಲಿ, ಸ್ತ್ರೀಯೇ ಆಗಲಿ, ಆವುದೋ ಕೆಲಸಕ್ಕಾಗಿ ಜನ್ಮವೆತ್ತಿ ಆವುದೋ ಕೆಲಸವನ್ನು ಮಾಡುವುದೆಂದರೆ, ಆರಿಗೆ ತಾನೇ ವ್ಯಸನವುಂಟಾಗಲಾರದು ಸ್ವಾಮಿನಿಯಾಗಿ ಬಾಳತಕ್ಕ ನಿನಗೆ ದಾಸೀವೃತ್ತಿಯು ಎಂದಿಗೂ ತಕ್ಕುದಲ್ಲ.

ಯುವತಿ—ತಾವು ಕೇಳುವುದಾದರೆ, ನನ್ನ ಜೀವಮಾನದ ತತ್ತ್ವವನ್ನು ಒಂದು ಮಾತಿನಲ್ಲಿ ಹೇಳುವೆನು

ಯುವಕ—ಹಾಗಾದರೆ ನಾನೇ ಧನ್ಯನು.

ಯುವತಿ—ನನ್ನ ಜೀವಿಕೆಯನ್ನು ನಾನೇ ಕಲ್ಪಿಸಿಕೊಳ್ಳಬೇಕಾಗಿರುವುದು.

ಯುವಕ—ಅದು ಯುಕ್ತವೇ ಸರಿ ಎಲ್ಲರೂ ಹೊಟ್ಟೆಗಾಗಿ ಬದುಕಬೇಕು ಆದರೆ ಗೌರವದಿಂದ ಬಾಳತಕ್ಕ ಮಾರ್ಗವೊಂದಿರುವುದಲ್ಲವೇ ?

ಯುವತಿ—ಮಹಾಶಯ! ಇಲ್ಲಿ ನಾನು ತಮ್ಮ ಸೇವೆಗಾಗಿರುವೆನೇ ಹೊರತು ತಮ್ಮ ಪ್ರಶ್ನೆಗೆ ಉತ್ತರಕೊಡುವುದಕ್ಕಲ್ಲ.

ಯುವಕ—ಸುಂದರಿ! ನನ್ನ ಪ್ರಶ್ನೆಗೆ ಉತ್ತರ ಕೊಡುವುದೂ ಬಿಡುವುದೂ ನಿನ್ನ ಇಷ್ಟವು. ನಾನೇನೋ ನಿನ್ನ ಮುಖೋಲ್ಲಾಸಕ್ಕಾಗಿ ಮಾತನಾಡುತ್ತಿರುವೆನೆಂದು ಮಟ್ಟಿಗೆ ತಿಳಿಯ ಬೇಡ, ಕಂಡೆಯಾ ? ನಿನ್ನ ಲಕ್ಷಣವನ್ನು ನೋಡಿದರೆ, ನೀನು ಈ ಕೆಲಸಕ್ಕಾಗಿ ಎಂದಿಗೂ ಹುಟ್ಟಿದವಳಲ್ಲ ನೀನು ಆಳತಕ್ಕವಳೇ ಹೊರತು ಆಳಾಗಿ ಬಾಳ ತಕ್ಕವಳಲ್ಲ.

ಯುವತಿ—ನಾನು ಈಗ ಪರಸೇವೆಗೆ ಕೈಯೊಡ್ಡಲೇ ಬೇಕಾಗಿರುವುದು; ಇದು ನನ್ನ ಗ್ರಹಚಾರವು. ಮಹಾಶಯ! ನಾನು ಏನ ತರಲಿ? ಅಪ್ಪಣೆಯಾಗಬೇಕು.

ಯುವತಿಯು ಇಷ್ಟು ದಿನಗಳ ವರೆಗೂ ಆರೂ ತನ್ನ ವಿಷಯ ದಲ್ಲಿ ಈ ರೀತಿಯಾಗಿ ಮಾತನಾಡಿದವರೇ ಇಲ್ಲದುದಕ್ಕಾಗಿ ಯುವಕ ನೊಡನೆ ಇನ್ನೂ ಮಾತನಾಡಬೇಕೆಂಬ ಬಯಕೆಗೊಂಡು ಆತನ ಉತ್ತರವನ್ನೇ ಇದಿರು ನೋಡುತ್ತಾ ನಿಂತಿದ್ದಳು.

ರೂಪಾಂತರವನ್ನು ತಾಳಿದ ಯುವಕನು ಮತ್ತೆ—ಎಲೌ! ನಿನ್ನ ತಾಯಿತಂದೆಗಳೇನಾಗಿರುವರು? ಎಂದನು.

ಯುವತಿ—ಮಹಾಶಯ! ತಮ್ಮ ಪ್ರಾತರಾಶಕ್ಕಾಗಿ ನಾನೇನ ತಂದುಕೊಡಲಿ? ತಡಮಾಡದೆ ತಿಳಿಸೋಣವಾಗಲಿ. ಇಲ್ಲಿಗೆ ತಮ್ಮಂತೆಯೇ ಬರತಕ್ಕ ಇತರರ ಅಪ್ಪಣೆಯನ್ನೂ ನಾನು ನೆರವೇರಿಸ ಬೇಕಾಗಿರುವುದರಿಂದ, ಒಂದೆಡೆಯಲ್ಲಿಯೇ ನಿಂತರೆ ಕೆಲಸವೂ ಸಾಗದು, ಯಜಮಾನಿಯೂ ಕೋಪಗೊಳ್ಳುವಳು.

ಯುವಕನು ಯುವತಿಯಾಡಿದ ಗಂಭೀರವಾದ ಭಾಷಣವನ್ನು ಕೇಳಿ ತನ್ನೊಳಗೆ ಚಿಂತಿಸಿದನು:—

"ಈಕೆಯ ರೂಪ ರೇಖಾ ಲಾವಣ್ಯಗಳು ಸದ್ವಂಶವನ್ನು ಸೂಚಿಸುತ್ತಿರುವುವು. ಈಕೆಯ ಮಾತಿನ ಮಾಧುರ್ಯವೂ ವೈಖರಿ ಯೂ ವಿದ್ಯಾವೈದುಷ್ಯವನ್ನು ಎತ್ತಿ ತೋರುತ್ತಿರುವುವು. ಈಕೆಯ ಗಾಂಭೀರ್ಯವು ಮುಂದಣ ಉನ್ನತಿಗೆ ಪ್ರಥಮಸೋಪಾನವಾ ಗಿರುವುದು. ಈಕೆಯು ಎಂದಿಗೂ ನಾಡಿನ ಹುಡುಗಿಯಲ್ಲ. ಆರಿಂದ

ಆವ ಕೆಲಸವನ್ನು ಮಾಡಿಸಬೇಕೆಂಬ ವಿವೇಚನೆಯೇ ಇಲ್ಲದ ದೈವದ ವಿಲಾಸವನ್ನು ಸುಟ್ಟರು ''

ಯುವಕನು ಈ ರೀತಿಯಾಗಿ ಚಿಂತಿಸಿದ ಬಳಿಕ ಯುವತಿಯನ್ನು ಕುರಿತು—ಎಲೌ ರಮಣೀಮಣಿ! ನನಗೆ ಈಗ ತುಂಬಾ ಹಸಿವಾಗುತ್ತಿರುವುದು. ಹೊಟ್ಟೆ ತುಂಬುವುದಕ್ಕೆ ಆವ ಉಪಹಾರವು ತಕ್ಕುದೆಂದು ನಿನಗೆ ತೋರುವುದೋ ಅದನ್ನೇ ತಂದುಕೊಡು, ಎಂದುತ್ತರವಿತ್ತನು

ಯುವತಿಯು ಹೊರಟುಹೋದಳು ಯುವಕನು ಆಕೆಯ ರೂಪಾನುರೂಪವಾದ ಗುಣದಲ್ಲಿ ಮುಗ್ಧನಾಗಿ, '' ನನ್ನ ಜನ್ಮದಲ್ಲಿ ಇಂತಹ ಹೆಂಗುಸನ್ನು ನಾನೆಂದಿಗೂ ನೋಡಿದವನಲ್ಲ ಏನು ಸೌಂದರ್ಯ! ಏನು ತಾರುಣ್ಯ! ಏನು ಲಾವಣ್ಯ! ಏನು ಮಾಧುರ್ಯ! ಏನು ಗಾಂಭೀರ್ಯ! ಇಂತಹ ಸ್ತ್ರೀರತ್ನವು ಕಸದಲ್ಲಿ ಬೆರೆತುಹೋಗಿರುವುದಲ್ಲಾ! ರತ್ನವು ಎಲ್ಲಿದ್ದರೂ ರತ್ನವೇ; ಕಸವು ಎಲ್ಲಿದ್ದರೂ ಕಸವೇ. '' ಬಹುರತ್ನಾ ವಸುಂಧರಾ,'' ಎಂದು ತನ್ನೊಳಗೆ ತಾನೇ ಆಲೋಚಿಸುತ್ತಿರುವಷ್ಟರಲ್ಲಿಯೇ ಆ ಯುವತಿಯು ಒಂದು ಶುದ್ಧವಾದ ಎಲೆಯಲ್ಲಿ ಕೆಲವು ಇಡ್ಡಲಿಗೆಗಳನ್ನೂ ಒಂದು ದೊನ್ನೆಯಲ್ಲಿ ಮೇಲೋಗರವನ್ನೂ ತಂದೊಪ್ಪಿಸಿದಳು.

ಯುವಕ—ರಮಣಿ! ನಿನ್ನಲ್ಲಿ ನನಗೆ ಅದೊಂದು ಬಗೆಯಾದ ಅಭಿಮಾನವು ಜನ್ಮಿಸಿರುವುದು. ಇದರ ಕಾರಣವನ್ನು ಆ ಮೇಲೆ ಅರುಹುವೆನು. ನಾನು ಅದೃಷ್ಟಹೀನನು ದುರದೃಷ್ಟವು ನನ್ನ ಬೆನ್ನ ಬಿದ್ದಿರುವುದು. ನನ್ನದೊಂದು ರಹಸ್ಯವುಂಟು; ಅದನ್ನು

ನಾನು ನಿನ್ನಲ್ಲಿ ಅರುಹಿ ತೆರಳುವೆನು. ಈಗ ನಾನು ಕಾರಣಾಂತರ ದಿಂದ ನನ್ನ ರೂಪವನ್ನು ಮಾರ್ಪಡಿಸಿಕೊಂಡಿರುವೆನು.

ನನ್ನ ಪೂರ್ವ ವೃತ್ತಾಂತವನ್ನು ಕೊಂಚ ಮಟ್ಟಿಗೆ ಇಲ್ಲಿ ತಿಳಿಸು ವೆನು. ನೀನು ಬೇಸರಪಡಲಾಗದು ನಾನೊಬ್ಬ ತಂದೆತಾಯಿಗ ಳಿಲ್ಲದ ತಬ್ಬಲಿ ನನ್ನ ತಂದೆಯು ಬದುಕಿದ್ದರೂ ಬದುಕಿರಬಹುದು ; ಅದರ ವಿಚಾರವು ನನಗೆ ಚೆನ್ನಾಗಿಯೂ ತಿಳಿಯದು ಒಂದು ವೇಳೆ ಆತನು ಬದುಕಿರುವುದಾದರೂ, ನಾನು ಈ ಜನ್ಮದಲ್ಲಿ ಆತ ನನ್ನು ನೋಡಲಾರದವನಾಗಿರುವೆನು ನನ್ನ ಆರನೆಯ ವಯಸ್ಸಿ ನಲ್ಲಿ ನಾನು ತಂದೆಯಿಂದ ಬೇರ್ಪಟ್ಟೆನು ಅಂದು ಮೊದಲು ಇಂದಿನ ವರೆಗೂ ನಾನು ಹೊಟ್ಟೆಗಾಗಿ ದುಡಿದು ದುಡಿದು ನಾಯು ತ್ತಿರುವೆನು. ನನ್ನ ಹೊಟ್ಟೆಯು ಅಷ್ಟಾಗಿ ನನಗೆ ಭಾರವೇನೂ ಆಗಿಲ್ಲ ನನಗೆ ಜನ್ಮವೇ ಭಾರವಾಗಿ ಹೋಗಿರುವುದು ಕಾರಣ ವೇನೆಂದರೆ—ನನಗೊಬ್ಬ ಗೂಢ ಶತ್ರುವು ಹುಟ್ಟಿಕೊಂಡು ನನಗೆ ತಿಳಿಯದ ಹಾಗೆ ನನ್ನ ಹೆಗಲೇರಿರುವನು ನನಗೆ ಎಲ್ಲಿಯಾದರೂ ಒಂದು ಗಣ್ಯವಾದ ಕೆಲಸವು ದೊರೆಯಿತೆಂದರೆ, ಆತನು ಅದನ್ನು ಅಲ್ಲಿಯೇ ಮುರಿದು ಬಿಡುವನು ವಿಲಾಸಪುರದಲ್ಲಿ ಯೋಗ ನಾರಾ ಯಣದಾಸನ ಕೋರಿಯಲ್ಲಿ ಎರಡು ವರ್ಷಗಳ ಕಾಲ ಕೆಲಸಕ್ಕೆ ಸೇರಿಕೊಂಡಿದ್ದೆನು ಇದು ನನ್ನ ಗೂಢ ಶತ್ರುವಿಗೆ ಹೇಗೋ ಗೊತ್ತಾಗಿ, ನನ್ನ ಕೆಲಸದ ಬಾಯಿಗೆ ಮಣ್ಣು ಬಿದ್ದುಹೋಯಿತು ಬಳಿಕ ನಾನು ಮತ್ತೆಲ್ಲಿಗಾದರೂ ಹೋಗಿ ತಲೆಯನ್ನು ತಪ್ಪಿಸಿಕೊಂಡು ಬದುಕಿರಬೇಕೆಂಬ ಆಸೆಯಿಂದ, ನಾನು ರೂಪಾಂತರವನ್ನು ತಾಳಿ ಕೊಂಡು ಇಲ್ಲಿಗೆ ಹೊರಟು ಬಂದಿರುವೆನು. ಈತಿಬಾಧೆಗಳಿಲ್ಲದ

ಸ್ಥಲಕ್ಕೆ ಹೋಗಿ ನಿರಾತಂಕವಾಗಿ ಬಾಳಬೇಕೆಂಬುದೇ ನನ್ನ ಪರಮೋದ್ದೇಶವಾಗಿರುವುದು.

ಈಗ ನನಗಾದರೋ ಸುಯೋಗದಿಂದ ನರಕಯಾತನೆಯಲ್ಲಿ ಸ್ವರ್ಗಸುಖವೇರ್ಪಟ್ಟಂತೆ ನಿನ್ನ ದರ್ಶನವಾಯಿತು ನನ್ನ ದುರ್ಯೋಗವನ್ನು ಜ್ಞಾಪಕಕ್ಕೆ ತಂದುಕೊಂಡು ನಿನ್ನನ್ನು ಹೀಗೆಲ್ಲಾ ಪ್ರಶ್ನೆ ಮಾಡಬೇಕಾಯಿತು. ಇದಕ್ಕಾಗಿ ನೀನು ನನ್ನಲ್ಲಿ ಆಗ್ರಹವನ್ನು ಮಾಡಬಾರದೆಂದು ನಾನು ವಿನಯದಿಂದ ಕೇಳಿಕೊಳ್ಳುವೆನು.

ಯುವತಿಯು ಯುವಕನ ದುಃಖವೃತ್ತಾಂತವನ್ನು ಕೇಳಿ ಮನನೆಗರಗಿದವಳಾಗಿ ಸ್ತ್ರೀಜಾತಿಗೆ ತಕ್ಕಹಾಗೆ ತನ್ನ ಕಣ್ಣುಗಳಲ್ಲಿ ನೀರ ತಂದು ಕೊಂಡಳು ಹೆಂಗುಸಿನ ಸ್ವಭಾವವು ಆವಾಗಲೂ ಮೃದುವಾದುದು. ಪುರುಷನಾದವನು ತನ್ನ ದುಶ್ಚೇಷ್ಟೆಗಳಿಂದ ಸ್ತ್ರೀಯ ಮಾರ್ದವವನ್ನು ಕಾಠಿಣ್ಯಕ್ಕೀಡುಮಾಡಿ ತನ್ನ ಸುಖಸಂಸಾರವನ್ನು ನಿಸ್ಸಾರವನ್ನಾಗಿ ಮಾಡಿಕೊಂಡು ಯಾವಜ್ಜೀವವೂ ಕೊರಗುವನು. ಸ್ತ್ರೀಯನ್ನು ಆಟದ ಬೊಂಬೆಯೆಂದು ತಿಳಿಯತಕ್ಕ ಮಹನೀಯರಿಗೆ ನಾವು ಹೇಳತಕ್ಕುದೇನಿರುವುದು? ಸ್ತ್ರೀ ಪುರುಷ ತತ್ತ್ವವನ್ನು ಅರಿತ ವಿವೇಕಿಯೊಬ್ಬನೇ ಅನುಕೂಲ ದಾಂಪತ್ಯದ ಸುಖವನ್ನು ಚೆನ್ನಾಗಿಯೂ ಅನುಭವಿಸುತ್ತಾ ಈ ಭೂಮಿಯನ್ನೇ ಸ್ವರ್ಗಖಂಡವನ್ನಾಗಿಸಿಕೊಂಡು ಬಾಳಿ ಹೆಸರ ಹೇಳುವನು.

ಯುವಕನು ಯುವತಿಗೆ ತನ್ನ ವೃತ್ತಾಂತವನ್ನು ತಿಳಿಸಿ ಆಕೆಯನ್ನೇ ನೋಡುತ್ತಾ ಕುಳಿತನು ಯುವತಿಯು ಈತನ ದುಃಖದಲ್ಲಿ ದುಃಖಿತೆಯಾಗಿ ಕಂಬನಿಗರೆದಳು. ಕಷ್ಟವೆಂಬುದು ಕಷ್ಟವನ್ನು ಅರಿಯದೆಯೇ ಇರತಕ್ಕವರಿಗೆ ಎಂದಿಗೂ ಗೊತ್ತಾಗುವುದಿಲ್ಲವೆಂದೂ,

ಈಕೆಯೂ ಆವುದೋ ಕಷ್ಟಕ್ಕೆ ಸಿಲುಕಿ ಸಂಕಟಪಡುತ್ತಿರುವಳೆಂದೂ ಯುವಕನು ಊಹಿಸಿದವನಾಗಿ ಯುವತಿಯನ್ನು ಕುರಿತು— ಯುವತಿ! ನಿನ್ನ ಹೆಸರೇನು? ಎಂದು ಪ್ರಶ್ನೆಮಾಡಿದನು.

ಯುವತಿ—(ಸಹಜಭಾವದಿಂದ) ಸರೋಜಸುಂದರಿ.

"ಸ-ರೋ-ಜ-ಸುಂ-ದ-ರಿ. ಎಂತಹ ಸುಂದರವಾದ ಹೆಸರು! ಈಕೆಯು ನಿಜವಾಗಿಯೂ ಸರೋಜ (ಕಮಲ)ದಂತೆ ಸುಂದರಿಯೇ ಸರಿ ಲೋಕದಲ್ಲಿ ರೂಪಕ್ಕೆ ತಕ್ಕ ಹೆಸರಿರುವುದು ಅಪೂರ್ವವು. ಕೆಲವರು ಸುಂದರಿಯರನ್ನು, ಅವರ ಸೌಂದರ್ಯಕ್ಕೆ ಎಲ್ಲಿ ದೃಷ್ಟಿ ತಗಲುವುದೋ ಎಂದು, ಕಾಳಿ, ಮಾರಿ, ಮಸಣಿ ಎಂದು ಮುಂತಾಗಿ ಹೆಸರಿನಿಂದ ಕೂಗುವರು; ಕೆಲವರು ಕುರೂಪಿಗಳನ್ನು, ಅವರ ಹೆಸರಿನಿಂದಲಾದರೂ ಸಂತೋಷಪಡೋಣವೆಂದು, ಸರ್ವಾಂಗ ಸುಂದರಿ, ತ್ರಿಪುರಸುಂದರಿ, ಜಗನ್ಮೋಹಿನೀ, ಮಂಗಳಾಂಗಿ, ಕಾಮಾಕ್ಷಿ, ವಿಶಾಲಾಕ್ಷಿ ಎಂದು ಮುಂತಾಗಿ ನಾಮಕರಣಮಾಡಿ ಆನಂದಿಸುವರು. ಲೋಕದ ಪರಿಪಾಟಿಯೆಲ್ಲವೂ ಪಲ್ಲಟವಾಗಿ ಹೋಗಿರುವುದು. ಇದ್ದುದನ್ನು ಇದ್ದಹಾಗೆಯೇ ಭಾವಿಸಿ ವರ್ತಿಸುವುದು ಜನರ ಜಾಯಮಾನದಲ್ಲಿಯೇ ಇಲ್ಲವೆಂದು ತೋರುವುದು," ಎಂದು ಯುವಕನು ಆಲೋಚಿಸಿದವನಾಗಿ—ಸರೋಜ! ನೀನೂ ನನ್ನಂತೆಯೇ ಆವುದೋ ದುಃಖಕ್ಕೆ ಪಕ್ಕಾಗಿರಬೇಕು; ಇಲ್ಲದಿದ್ದರೆ, ನೀನು ಎಂದಿಗೂ ಇಂತಹ ಹೀನವಾದ ಕೆಲಸವನ್ನು ಕೈಕೊಳ್ಳುತ್ತಲೇ ಇರಲಿಲ್ಲ. ಒಂದು ವೇಳೆ ನೀನು ಈ ಅಡುಗೂಳಜ್ಜಿಗೆ ದೇಹಾನುಬಂಧಿನಿಯಾಗಿರುವುದಾದರೆ, ಇದರಲ್ಲಿ ನನ್ನ ಆಕ್ಷೇಪಣೆಯೇನೂ ಇರಲಾರದು, ಎಂದು ನುಡಿದನು.

ಸರೋಜ—ಇಲ್ಲ, ಮಹಾಶಯ! ನಾನು ಈಕೆಗೆ ಆವಾಗಲೂ ದೇಹಾನುಬಂಧಿನಿಯಲ್ಲ. ಕಷ್ಟಕಾಲದಲ್ಲಿ ಈಕೆಯು ನನ್ನ ಕೈಹಿಡಿದು ಕಾಪಿಟ್ಟುದಕ್ಕಾಗಿ, ನಾನು ಈಕೆಗೆ ಬಲುವಾಗಿ ಬಾಧ್ಯಪಟ್ಟಿರುವೆನು.

ಮಧು—ಹಾಗಾದರೆ, ನೀನೂ ನನ್ನಂತೆಯೇ ಕಷ್ಟಕ್ಕೆ ಸಿಲುಕಿ ನರಳುತ್ತಿರಬೇಕು

ಸರೋಜ—ತಮ್ಮೊಡನೆ ಸುಳ್ಳೇಕೆ? ನಾನೂ ಅದೃಷ್ಟ ಹೀನೆಯು.

ಮಧು—ನಿನಗೆ ತಂದೆತಾಯಿಗಳಿರುವರೇ?

ಸರೋಜ—ನಾನು ತಂದೆತಾಯಿಗಳಿಲ್ಲದ ತಬ್ಬಲಿ.

ಮಧು—ಜೀವನಕ್ಕಾಗಿ ಇದಕ್ಕಿಂತಲೂ ಲಾಭಕರವಾದ ಗೌರವದ ಉದ್ಯೋಗವು ನಿನಗೆ ದೊರೆಯದೇ ಹೋದುದೇ? "ಕೆಟ್ಟು ಪಟ್ಟಣ ಸೇರು" ಎನ್ನುವಂತೆ ನೀನು ರಾಜನಗರಕ್ಕೆ ಹೋಗಿ ಹೆಂಗುಸಿಗೆ ಯೋಗ್ಯವಾದ ಕೆಲಸವೊಂದನ್ನು ಸಂಪಾದಿಸಿ ಕೊಂಡು ಮಾನದಿಂದ ಬದುಕಿಕೊಂಡಿರಬಾರದೇ? ಈ ಪ್ರಪಂಚ ದಲ್ಲಿ ಎಂಥೆಂಥವರೋ ಹೇಗೋ ಗೌರವದಿಂದ ಬದುಕುತ್ತಿರುವಲ್ಲಿ, ನಿನಗೆ ಮಟ್ಟಿಗೆ ಸ್ಥಲವಿಲ್ಲವೇನು?

ಸರೋಜ—ಮಹಾಶಯ! ನಿನ್ನ ಸ್ವಭಾವವಾದರೋ ವಿಲಕ್ಷಣವಾದುದು.

ಮಧು—ಹಾಗೆಯೇ?

ಸರೋಜ—ಅಹುದು.

ಮಧು—ಹೇಗೆ?

ಸರೋಜ—ಮಹಾಶಯ! ನೀವು ಇಲ್ಲಿಗೆ ಬಂದು ಇನ್ನೂ ಅರ್ಧಘಂಟೆಯ ಹೊತ್ತಾಗುವುದಕ್ಕಿಲ್ಲ; ಇಷ್ಟರೊಳಗಾಗಿ ನನ್ನ ವಿಷಯದಲ್ಲಿ ಇಷ್ಟು ಮರುಕಗೊಂಡು, ನನಗೆ ಈರೀತಿಯಾಗಿ ಬುದ್ಧಿಗಲಿಸಬೇಕಾದರೆ, ತಾವು ವಿಲಕ್ಷಣಸ್ವಭಾವದವರೇ ಸರಿ

ಮಧು—ಸರೋಜ! ನಾನು ಇದ್ದುದನ್ನು ಇದ್ದಹಾಗೆಯೇ ಹೇಳತಕ್ಕವನು. ನಾನು ನಿನ್ನನ್ನು ಕಂಡಾಗಿನಿಂದಲೂ, ನನ್ನ ಮನವು ನಿನ್ನ ವಿಷಯದಲ್ಲಿ ಕನಿಕರಗೊಂಡಿರುವುದು. ಆದುದರಿಂದ ನಿನಗೆ ಈ ಕೆಲಸವು ತಕ್ಕುದಲ್ಲವೆಂದು ನಾನು ಅಡಿಗಡಿಗೂ ಹೇಳುತ್ತಿರುವುದು.

ಮಧುಮಾಧವನು ಈ ರೀತಿಯಾಗಿ ಹೇಳುತ್ತಿರುವಷ್ಟರೊಳಗಾಗಿಯೇ, ಮತ್ತೆ ಕೆಲವರು ಪ್ರಾತರಾಶಕ್ಕಾಗಿ ಆ ಕೋಣೆಯೊಳಗೆ ಪ್ರವೇಶಮಾಡಿದರು ಬಳಿಕ ಆತನಿಗೆ ಸರೋಜಸುಂದರಿಯೊಡನೆ ಮತ್ತೆ ಮಾತನಾಡಲು ಅವಕಾಶವು ದೊರೆಯದೇ ಹೋದುದು. ಅದಕ್ಕಾಗಿ ಆತನು ಬಲುವಾಗಿ ಕತಿಗೊಂಡನು.

ಮಧುಮಾಧವನು ತೃಪ್ತಿಯಾಗುವ ವರೆಗೂ ಉಪಹಾರವನ್ನು ಸೇವಿಸಿ, ಮತ್ತೆ ಆಕೆಯ ದರ್ಶನವಾಗಬಹುದೆಂಬ ಕೌತೂಹಲದಿಂದ ಬಲು ಹೊತ್ತು ಅಲ್ಲಿಯೇ ಕುಳಿತು ನೋಡಿದನು. ಎಷ್ಟು ಹೊತ್ತಾದರೂ ಆಕೆಯು ಬರಲೇ ಇಲ್ಲ ಇನ್ನು ಅಲ್ಲಿರುವುದು ತರವಲ್ಲವೆಂದು ಮಧುಮಾಧವನು ಅಡುಗೂಳಜ್ಜಿಗೆ ಉಪಹಾರದ ಬೆಲೆ

ಯನ್ನು ಸಲ್ಲಿಸಿ ತನ್ನ ದಾರಿವಿಡಿದು ಮುಂದಕ್ಕೆ ತೆರಳಿದನು. ಆತನು ಪಯಣಮಾಡುತ್ತಾ, "ಎಂದಾದರೊಂದು ದಿನ ಸರೋಜ ಸುಂದರಿಯನ್ನು ಕಂಡುಕೊಂಡು ಆಕೆಯ ರಹಸ್ಯವೇನೆಂಬುದನ್ನು ಅರಿಯದೇ ಬಿಡೆನು," ಎಂದುಕೊಂಡು ದಾರಿಯುದ್ದಕ್ಕೂ ಕಂಡಕಂಡವರೊಡನೆ ಕಾಲೋಚಿತವಾಗಿ ಒಂದೆರಡು ಮಾತುಗಳನ್ನಾಡುತ್ತಾ ಮೂರು ಮೈಲಿಗೆಳಷ್ಟು ದಾರಿಯನ್ನು ಸಾಗಿದನು.

ಇಷ್ಟೆನ್ನುವುದರೊಳಗಾಗಿ ಒಬ್ಬ ಹೆಂಗುಸು ಒಂದೇ ಉಸಿರಿನಿಂದ ಅನುಸರಿಸಿ ಓಡಿ ಬರುತ್ತಿರುವುದನ್ನು ನೋಡಿ, 'ಈಕೆಯು ಆರಿರ ಬಹುದು? ಹೀಗೆ ಓಡಿ ಬರಲು ಕಾರಣವೇನು? ಈಕೆಗೆ ಸಂಭವಿಸಿರಬಹುದಾದ ವಿಪತ್ತಾದರೂ ಏನು?' ಎಂಬುದನ್ನು ಅರಿಯುವುದಕ್ಕಾಗಿ ಮಧುಮಾಧವನು ದಾರಿಯಲ್ಲಿಯೇ ನಿಂತು ಬಿಟ್ಟನು ಕೊಂಚಹೊತ್ತಿನಲ್ಲಿ ಆ ಹೆಂಗುಸು ಓಡಿಬಂದು ಮಧುಮಾಧವನ ಬಳಿಯಲ್ಲಿ ನಿಂತಳು ಆಕೆಯೇ ಸರೋಜಸುಂದರಿ.

---

## ಮೂರನೆಯ ವಿಲಾಸ

### ನರಕದಲ್ಲಿ ಸ್ವರ್ಗ

ಇಲ್ಲಿಯ ವರೆಗೂ ಗೋಪ್ಯದಲ್ಲಿರುತ್ತಿದ್ದ ಅದೃಷ್ಟವು ಹೊರಬೀಳುವುದಕ್ಕೆ ದಾರಿಯನ್ನು ಏರ್ಪಡಿಸಿಕೊಂಡಿತು. ಸರೋಜಸುಂದರಿಯು ಮಧುಮಾಧವನನ್ನು ಕಂಡುಕೊಂಡಾಗ, ಆತನು ಜನಶೂನ್ಯವಾದ ದಾರಿಯಲ್ಲಿ ಮೆಲ್ಲಮೆಲ್ಲನೆ ಪಯಣಮಾಡುತ್ತಿದ್ದನು. ಸರೋಜಸುಂದರಿಯು ಮಧುಮಾಧವನನ್ನು ಕಂಡಕೂಡಲೆ ಸಂತಸಗೊಂಡವಳಾಗಿ—ಮಹಾಶಯ! ತಾವು ಸಿಕ್ಕಿ

ದುದು ನನಗೆ ತುಂಬಾ ಸಂತೋಷವಾಯಿತು, ಎಂದು ನಿಟ್ಟುಸಿರನ್ನು ಬಿಡುತ್ತಾ ನುಡಿದಳು.

ಮಧು—(ಅಚ್ಚರಿಯಿಂದ) ನನಗಾಗಿ ನೀನು ಬಂದೆಯಾ, ಸರೋಜ?

ಸರೋಜ—ಅಹುದು, ತಮಗಾಗಿಯೇ ಬಂದೆನು ನನ್ನದೊಂದು ಪ್ರಶ್ನೆಯುಂಟು

ಮಧು—ಒಂದು ಪ್ರಶ್ನೆಯಲ್ಲ, ನೂರು ಪ್ರಶ್ನೆಗಳಿಗಾದರೂ ಉತ್ತರವೀವೆನು.

ಸರೋಜ—ಮಹಾಶಯ! ಇಂದಿನ ಪ್ರಾತಃಕಾಲದಲ್ಲಿ ತಾವು ನನ್ನೊಡನೆ ಹೇಳಿದ ಸಂಗತಿಗಳೆಲ್ಲವೂ ಸತ್ಯವಾದುವಷ್ಟೇ?

ಮಧು—ವಿಷಯವೇನು?

ಸರೋಜ—ತಮ್ಮ ವಿಷಯ.

ಮಧು—ನಾನು ಎಂದಿಗೂ ಸುಳ್ಳಾಡತಕ್ಕವನಲ್ಲ.

ಸರೋಜ—ತಾವು ನಂಬುಗೆಗೆ ತಕ್ಕ ಮನುಷ್ಯರೋ?

ಮಧು—ಸರೋಜ! ಇದು ವಿಲಕ್ಷಣವಾದ ಪ್ರಶ್ನೆ.

ಸರೋಜ—(ಗಂಭೀರ ಭಾವದಿಂದ) ನನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಡೋಣವಾಗಲಿ. ನನ್ನದು ಸಲಕ್ಷಣ ಪ್ರಶ್ನೆಯೋ, ವಿಲಕ್ಷಣ ಪ್ರಶ್ನೆಯೋ ; ಅದರಿಂದ ನಿಮಗಾಗುವುದೇನು? ನನಗೆ ಬೇಕಾದುದು ಉತ್ತರ.

ಮಧು—(ಅಪ್ರತಿಭನಾಗಿ) ಅಹುದು; ನಾನು ನಂಬುಗೆಗೆ ತಕ್ಕವನು. ನನ್ನನ್ನು ಎಲ್ಲಿಯ ವರೆಗಾದರೂ ನಂಬಬಹುದು. ನಾನು ಈ ಮಾತನ್ನು ಶಪಥಪೂರ್ವಕವಾಗಿ ಹೇಳುವೆನು.

ಸರೋಜ—ಇಷ್ಟಾದರೂ ತಾವು ಅದೃಷ್ಟಹೀನರು.

ಮಧು—ಇಷ್ಟಾದರೂ ನಾನು ಅದೃಷ್ಟಹೀನನು. ಸರೋಜ! ಈ ಪ್ರಶ್ನೆಗಳನ್ನು ನೀನು ಕೇಳಲು ಕಾರಣವೇನು?

ಸರೋಜ—ತಾವು ಅದೊಂದು ಗುರುತರವಾದ ಅಪರಾಧದಿಂದ ಅಪರಾಧಿಗಳಲ್ಲವೇ?

ಮಧು—(ಕಂಗೆಟ್ಟವನಾಗಿ) ನಾನು ಆವ ಅಪರಾಧದಿಂದ ಅಪರಾಧಿ? ಅಪರಾಧವೆಂದರೇನು?

ಸರೋಜ—ನೀವು ನಿನ್ನೆಯ ರಾತ್ರಿಯಲ್ಲಿ ಯೋಗೆ ನಾರಾಯಣದಾಸನ ಕೋರಿಗೆ ಬೆಂಕಿಹಾಕಿ, ಆತನ ಕಬ್ಬಿಣದ ಪೆಟ್ಟಿಗೆಯಲ್ಲಿದ್ದ ಅಪಾರವಾದ ಧನವನ್ನು ಅಪಹರಿಸಿಕೊಂಡು ಹೊರಟು ಬಂದಿರುವಿರಲ್ಲವೇ?

ಮಧುಮಾಧವನು ಈ ಮಾತನ್ನು ಕೇಳಿದ ಕೂಡಲೆ, ಅವನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಗಿ, ಆತನು ನಿಂತಿರಲಾರದೆ ಕೆಳಗೆ ಕುಳಿತು ಬಿಟ್ಟನು. ಒಂದು ನಿಮಿಷವೆನ್ನುವುದರೊಳಗಾಗಿ ಆತನ ಮುಖವು ಹೆಣದ ಮುಖದಂತಾಗಿಬಿಟ್ಟಿತು. ಆತನಿಗೆ ಬೆಂಕಿಯ ಸಮಾಚಾರವಾಗಲಿ, ಕಳ್ಳತನದ ಸುದ್ದಿಯೇ ಆಗಲಿ, ಒಂದೂ ಗೊತ್ತಿಲ್ಲವೆಂಬುದು ನಮ್ಮ ಪ್ರಿಯಪಾಠಕ ಮಹಾಶಯರಿಗೂ ಚೆನ್ನಾಗಿಯೂ ಗೊತ್ತಿರುವುದು. ಮಧುಮಾಧವನು

ಈ ಸಲ್ಲದ ಅಪವಾದವನ್ನು ಕೇಳಿದಕೂಡಲೆ ಆತನ ಎದೆಯು 'ಡವ್ ಡವ್, ಡವಾ ಡವ್' ಎಂದು ಹೊಡೆದುಕೊಳ್ಳಲಾರಂಭಿಸಿತು. ಆತನು ಅರಳಿಯೆಲೆಯಂತೆ ಥರಥರನೆ ನಡುಗುತ್ತಾ—ಸರೋಜ ಸುಂದರಿ! ಅದರ ವಿಚಾರವೆಲ್ಲವನ್ನೂ ಬಿಡಿಸಿ ಹೇಳು. ನನಗೆ ಇದೊಂದೂ ಅರ್ಥವಾಗದು, ಎಂದು ತೊಡರುತ್ತಾ ಮಾತ ನಾಡಿದನು.

ಸರೋಜ—ನೀವು ನಿಜವಾಗಿಯೂ ನಿರಪರಾಧಿಗಳೇ?

ಮಧು—(ಭಯದಿಂದ ನಡುಗುತ್ತಾ) ಈ ಸಂದರ್ಭದಲ್ಲಿ ನೀನು ಎಷ್ಟು ನಿರಪರಾಧಿನಿಯೋ, ನಾನೂ ಅಷ್ಟೇ ನಿರಪರಾಧಿಯು.

ಸರೋಜ—(ಉದಾಸೀನ ಭಾವದಿಂದ) ನನಗೇ ನೊ ನಂಬುಗೆ ಸಾಲದು. ಇದರ ತತ್ತ್ವವೇ ನನಗೆ ಗೊತ್ತಾಗಲೊಲ್ಲದು ಮಹಾಶಯ!

ಸರೋಜಸುಂದರಿಯು ತನ್ನ ಮಾತಿಗೆ ಕೊಂಚವೂ ಬೆಲೆ ಕೊಡದೆ ಮಾತನಾಡಿದುದಕ್ಕಾಗಿ ಮಧುಮಾಧವನು ಖಿನ್ನನಾಗಿ—ಸರೋಜ! ನಿನ್ನ ಮಾತಿನಿಂದ ನನಗೆ ವ್ಯಸನವುಂಟಾಗುತ್ತಿರುವುದು. ಹೀಗೆ ಸಂಶಯವನ್ನು ಇಟ್ಟುಕೊಂಡು ಕೊರಗುವುದೂ ಕೊಲ್ಲುವುದೂ ತರವಲ್ಲ. ವಿಷಯವೇನೆಂಬುದನ್ನು ಸ್ಪಷ್ಟಪಡಿಸು. ಅಪರಾಧ ವೆಂಬುದು ಆವಾಗಲೂ ಅಡಗಿರತಕ್ಕುದಲ್ಲ; ಇದಕ್ಕಾಗಿ ನೀನು ನನಗಾಗಿ ಕೊರಗಬೇಕಾದುದಿಲ್ಲ, ಎಂದನು.

ಸರೋಜ—ತಿಳಿಸುವೆನು.

ಮಧು—ಸಂತೋಷ.

ಸರೋಜ—ನಿನ್ನೆಯ ರಾತ್ರಿಯಲ್ಲಿ ನೀವೇ ಆ ಕೋಠಿಗೆ ಬೆಂಕಿಹಾಕಿ, ಆತನ ಹಣವನ್ನು ಅಪಹರಿಸಿಕೊಂಡು ಓಡಿಹೋಗಿರುವುದಾಗಿ ಸುದ್ದಿಯೆದ್ದು, ಆ ಮಹಾಪರಾಧವು ನಿಮ್ಮ ತಲೆಯ ಮೇಲೆಯೇ ಒರಗಿಸಲ್ಪಟ್ಟು ನಿಮ್ಮನ್ನು ಎಲ್ಲಿದ್ದರೂ ಹಿಡಿದು ತರುವುದಕ್ಕಾಗಿ ಪತ್ತೇದಾರರು ಬೆನ್ನಹತ್ತಿರುವರು. ನಿಮಗೆ ಇದರಿಂದ ಉತ್ತಾರಣೆಯೆಂಬುದೇ ಇಲ್ಲವೆಂದು ತೋರುತ್ತಿರುವುದು.

ಮಧುಮಾಧವನು ಕೊಂಚ ಹೊತ್ತು ಆಲೋಚಿಸಿ–ಇದೆಲ್ಲವೂ ನಿನಗೆ ಗೊತ್ತಾದ ಬಗೆ? ಎಂದು ಪ್ರಶ್ನೆಮಾಡಿದನು.

ಸರೋಜ—ನೀವು ನಿರಪರಾಧಿಗಳಷ್ಟೇ?

ಮಧು—ಅಹುದು; ನಾನು ನಿಜವಾಗಿಯೂ ನಿರಪರಾಧಿ.

ಸರೋಜ—ಆದರೆ, ನೀವು ರೂಪಾಂತರವನ್ನು ತಾಳಿರುವಿರಿ.

ಮಧು—ತಾಳಿರುವೆನು.

ಸರೋಜ—ನೀವು ವಿಲಾಸಪುರದಿಂದ ಓಡಿಬಂದಿರುವಿರಿ.

ಮಧು—ನಾನು ಓಡಿಬಂದಿರುವುದೇನೋ ನಿಜ. ಇದರ ಕಾರಣವನ್ನು ನಾನು ವಿಶದವಾಗಿ ತಿಳಿಯಪಡಿಸುವೆನು; (ಜ್ಞಾಪಿಸಿಕೊಂಡು) ನನ್ನ ವಿಷಯವೆಲ್ಲವನ್ನೂ ನಿನಗೆ ಮೊದಲೇ ತಿಳಿಸಿರುವೆನಲ್ಲವೇ? ನನ್ನ ಗೂಢಶತ್ರುವಿನ ಹಾವಳಿಯಿಂದ ಪಾರಾಗುವುದಕ್ಕಾಗಿ ನಾನು ಈ ರೀತಿಯಾಗಿ ವರ್ತಿಸಬೇಕಾಗಿರುವುದು.

ಸರೋಜ—ಮಹಾಶಯ! ನಾನು ಹೀಗೆಲ್ಲಾ ಮಾತನಾಡಿದುದಕ್ಕಾಗಿ ತಾವು ನನ್ನಲ್ಲಿ ಆಗ್ರಹಮಾಡಲಾಗದು. ತಮ್ಮ ಮಾತಿನಲ್ಲಿ ನನಗೆ ನಂಬುಗೆಯುಂಟು; ತಾವು ನಿರಪರಾಧಿಗಳೆಂದು ನಾನು ಅರಿತುಕೊಂಡಿರುವೆನು. ಇಲ್ಲದಿದ್ದರೆ, ನಾನು ತಮ್ಮನ್ನು ಹುಡುಕಿಕೊಂಡು ಇಷ್ಟುದೂರ ಬರಬೇಕಾದುದಕ್ಕೆ ಕಾರಣ ತಾನೇ ಏನಿರುತಿದ್ದಿತು?

ಮಧು—ನನ್ನನ್ನು ಅಪರಾಧಕ್ಕೆ ಗುರಿಮಾಡಿದ ವಿಷಯವು ನಿನಗೆ ಹೇಗೆ ಗೊತ್ತಾದುದು?

ಸರೋಜ—ಪತ್ತೇದಾರರು ನಿನ್ನ ಬೆನ್ನ ಹತ್ತಿರುವರೆಂದು ನಾನು ಮೊದಲೇ ಹೇಳಲಿಲ್ಲವೇ?

ಮಧು—ಈಗ ಅವರೆಲ್ಲಿರುವರು?

ಸರೋಜ—ಈ ಮುಹೂರ್ತದಲ್ಲಿ ಅವರು ಎಲ್ಲಿರುವರೆಂಬುದು ನನಗೆ ತಿಳಿಯದಿದ್ದರೂ, ಅವರಿರುವ ಸ್ಥಲವು ನನಗೆ ಗೊತ್ತುಂಟು.

ಮಧು—ಎಲ್ಲಿ?

ಸರೋಜ—ಅಡುಗೂಳಜ್ಜಿಯ ಬೀಡಾರದಲ್ಲಿ; ನೀವು ಹೊರಟುಹೋದ ಕೆಲವು ಗಂಟೆಗಳ ಕಾಲದ ಮೇಲೆ, ಪತ್ತೇದಾರರಿಬ್ಬರು ಅಲ್ಲಿಗೆ ಬಂದು ಸೇರಿದರು. ಅವರು ನಿನ್ನ ರೂಪಲಕ್ಷಣಗಳನ್ನು ತಿಳಿಸಲು, ಅಡುಗೂಳಜ್ಜಿಯು ನಿಮ್ಮ ವಿಷಯದಲ್ಲಿ ಅವಳಿಗೆ ತಿಳಿದಷ್ಟನ್ನು ತಿಳಿಸಿದಳು.

ದೈವಯೋಗದಿಂದ ಇದೆಲ್ಲವೂ ನನ್ನ ಕಿವಿಗೆ ಬಿದ್ದುವು. ಬಳಿಕ ಅವರು ಪತ್ತೇದಾರರೆಂದೂ, ನಿಮ್ಮನ್ನು ಪತ್ತೆಮಾಡುವುದಕ್ಕಾಗಿಯೇ ಹೊರಟಿರುವವರೆಂದೂ ನನಗೆ ಗೊತ್ತಾಯಿತು. ನೀವು ಕೆಲಸದಿಂದ ನಿವೃತ್ತರಾದುದಕ್ಕಾಗಿ ಹೊಟ್ಟೆಯ ಕಿಚ್ಚಿನಿಂದ ಆ ಕೋರಿಗೆ ಬೆಂಕಿ ಹಾಕಿದುದಲ್ಲದೆ, ಯಜಮಾನನ ಪೆಟ್ಟಿಗೆಯಲ್ಲಿದ್ದ ಅಪಾರವಾದ ಹಣವನ್ನೂ ಅಪಹರಿಸಿಕೊಂಡು ರೂಪಾಂತರದಿಂದ ಓಡಿಬಂದಿರುವ ಕಾರಣ, ಅಪರಾಧವನ್ನು ನಿಮ್ಮ ಮೇಲೆಯೇ ಒರಗಿಸಿ ನಿಮ್ಮನ್ನು ದಸ್ತಗಿರಿ ಮಾಡುವುದಕ್ಕಾಗಿಯೇ ಅವರು ಹೊರಟು ಬಂದಿರುವ ಸಂಗತಿಯು ನನಗೆ ಗೊತ್ತಾಯಿತು ಪರ್ಯಾಲೋಚಿಸಿ ನೋಡಲಾಗಿ ನೀವೇ ಅದೃಷ್ಟಶಾಲಿಗಳು

ಮಧು—ನಾನು—ನಾನು ಅದೃಷ್ಟಶಾಲಿಯೇ?

ಸರೋಜ—ನೀವೇ ಅದೃಷ್ಟಶಾಲಿಗಳು

ಮಧು—ಅದು ಹೇಗೆ, ಸರೋಜ?

ಸರೋಜ—ಅವರು ನಿಮ್ಮನ್ನು ಹುಡುಕುವುದಕ್ಕಾಗಿ ಮತ್ತೊಂದು ಗ್ರಾಮದ ಕಡೆಗೆ ತಿರುಗಿಬಿಟ್ಟರು ಅವರಾದರೋ ನಿಮ್ಮ ಮೊದಲಿನ ಹಾಗೂ ಈಗಿನ ಚಹರೆಯನ್ನು ಚೆನ್ನಾಗಿಯೂ ಅರಿತುಕೊಂಡಿರುವುದರಿಂದ, ನಿಮ್ಮನ್ನು ಅವರು ಎಲ್ಲಿಯಾದರೂ ಎಂದಾದರೂ ಗುರುತಿಸಬಹುದು ನಾನು ಈ ಸಂಗತಿಗಳೆಲ್ಲವನ್ನೂ ಅರಿತ ಕೂಡಲೆ, ಇದನ್ನು ನಿಮಗೆ ತಿಳಿಸುವುದಕ್ಕಾಗಿ ಇಲ್ಲಿಗೆ ಓಡಿ ಬಂದೆನು. ನೀವು ನಿಜವಾಗಿಯೂ ನಿರಪರಾಧಿಗಳೆಂದು ನನಗೆ ನಂಬುಗೆಯುಂಟು.

ಮಧು—ಸರೋಜ! ನಾನು ಅದೃಷ್ಟಶಾಲಿಯಲ್ಲವೇ ಹೊರತು, ನಾನು ನಿರಪರಾಧಿಯೆಂಬುದರಲ್ಲಿ ಎಳ್ಳಷ್ಟೂ ಸುಳ್ಳಿಲ್ಲ ಅಗ್ನಿದಾಹ, ಕಳ್ಳತನಗಳಿಗಿಂತಲೂ ಮಿಂಚಿದ ಅಪರಾಧವಿಲ್ಲ. ಈ ಅಪರಾಧದಿಂದ ಅಪರಾಧಿಯೆನಿಸಿಕೊಳ್ಳುವುದು ಭಯಂಕರವಾದ ಮಹಾ ದುರ್ಯೋಗವು ಇದು ನನ್ನ ಹಣೆಯಲ್ಲಿ ಬರೆದುದೇ!

ಸರೋಜ—ನೀನು ನಿರಪರಾಧಿಯಷ್ಟೇ?

ಮಧು—ನಾನೇನೋ ನಿರಪರಾಧಿಯು ನೀನು ಹೇಳುವು ವನ್ನು ನೋಡಿದರೆ, ಅಪರಾಧವು ನನ್ನ ಮೇಲೆಯೇ ಒರಗುವಂತಿದೆ. ಆತ್ಮರಕ್ಷಣೆಗೆ ಸಾಕಾದಷ್ಟು ಕಾರಣವು ನನ್ನಲ್ಲಿಲ್ಲ ಈ ಸಂದರ್ಭ ದಲ್ಲಿ ನನಗೆ ಆವನೂ ಸಹಾಯನಾಗಿ ಬರುವಂತಿಲ್ಲ ನಾನು ಅದೃಷ್ಟ ಹೀನನಾಗಿರುವುದರ ಜತೆಗೆ ಮಿತ್ರಹೀನನೂ ಆಗಿರುವೆನು. ಗೂಢ ಶತ್ರುವಿನ ಪ್ರಯತ್ನನೋಡಿದರೆ, ಕಾರಾಗೃಹವಾಸವು ನನ್ನ ಹಣೆ ಯಲ್ಲಿ ಬರೆದಂತಿದೆ ಇದರಿಂದ ನನ್ನ ಜೀವಿತವೇ ಹಾಳಾಗಿ ಹೋಗುವ ಸಂಭವವು ಒದಗಿ ಬಂದುದಕ್ಕಾಗಿ ನನ್ನ ದುರ್ದೈವವನ್ನು ಎಷ್ಟು ನಿಂದಿಸಿಕೊಂಡರೂ ಸಾಲದು

ಸರೋಜ—ಮಹಾಶಯ! ನಾನು ನಿನಗೆ ಮಿತ್ರಿಯಾಗಿರು ವಲ್ಲಿ, ನೀನು ಮಿತ್ರಹೀನನೆಂತಾಗುವೆ? ನೀನು ಅದೃಷ್ಟ ಹೀನ ನೆಂಬುದು ನಿಜ, ಆದರೆ ನಿನ್ನ ಸತ್ಯಸಂಧತೆಗಾಗಿ ನಾನು ನಿನಗೆ ಒತ್ತಾಸೆಯಾಗಿದ್ದುಕೊಂಡು ಶಕ್ತಿಮೀರಿ ಉಪಕರಿಸುವೆನು. ಇದಕ್ಕಾಗಿ ನೀನು ಹೆದರಬೇಕಾದುದೇನೂ ಇರುವುದಿಲ್ಲ.

ಸರೋಜಸುಂದರಿಯು ಈ ರೀತಿಯಾಗಿ ಮಾತನಾಡುತ್ತಿರು ವಾಗ, ಆಕೆಯ ಮುಖದಲ್ಲಿ ಕೆಂಬಣ್ಣವೂ, ಕಣ್ಣುಗಳಲ್ಲಿ ಅದೊಂ

ದಪೂರ್ವ ತೇಜಸ್ಸೂ ಕಾಣಿಸಿಕೊಂಡಿತು. ಆಕೆಯ ಸೌಂದರ್ಯವು ಇಮ್ಮಡಿಸಿ, ಮೃದುಮಧುರವಾದ ಮಾತಿನ ವೈಖರಿಯಲ್ಲಿ ಅಕೃತ್ರಿಮವಾದ ಭಾವವು ಮಧುಮಾಧವನ ಶೋಕಾಗ್ನಿಯನ್ನು ನಿಮಿಷಮಾತ್ರದಲ್ಲಿ ಆರಿಸಿಬಿಟ್ಟಿತು. ಸರೋಜಸುಂದರಿಯ ಒತ್ತಾಸೆಯಿಂದ ಮಧುಮಾಧವನ ಮನದಲ್ಲಿ ಆಶಾಸಂಚಾರವಾಗಿ, ಬಂದ ವಿಪತ್ತನ್ನು ಧೈರ್ಯದಿಂದ ಗೆದ್ದು ಗೌರವದಿಂದ ಬಾಳಬೇಕೆಂಬ ಉತ್ಸಾಹವು ತಲೆ ದೋರಿತು. ಬಳಿಕ ಮಧುಮಾಧವನು ತನ್ನ ವ್ಯಸನವೆಲ್ಲವನ್ನೂ ಒತ್ತಟ್ಟಿಗಿಟ್ಟು ಆನಂದಪರವಶನಾಗಿ—ಸರೋಜಸುಂದರಿ! ಗೂಢಶತ್ರುವಿನ ಅತ್ಯಾಚಾರವು ನನಗೆ ಒದಗಿಬರಲಿಕ್ಕಾಗಿ, ನಿನ್ನ ಸಾಹಾಯ್ಯವು ನನಗೆ ದೊರೆಯುವಂತಾದುದು ನನ್ನ ಪೂರ್ವ ಪುಣ್ಯವು ಇದಕ್ಕಿಂತಲೂ ಹೆಚ್ಚಾಗಿ ಫಲಿಸುವುದೆಂದರೇನು? ಇಂದು ನಾನೇ ಧನ್ಯನು, ಎಂದು ಆಕೆಯನ್ನು ಕೊಂಚವಾಗಿ ಸ್ತೋತ್ರ ಮಾಡಿದನು

ಸರೋಜ—ಮಹಾಶಯ! ಇಂತಹ ಮಾತುಗಳಿಗೆ ಇದು ಅಕಾಲವು ಮುಂದೆ ನಾವು ಮಾಡಬೇಕಾದುದೇನೆಂಬುದನ್ನು ಇಂದೇ ಚಿಂತಿಸಬೇಕಾಗಿರುವುದು. ನಿನ್ನ ಬೆನ್ನ ಹತ್ತಿರತಕ್ಕ ಆ ಪತ್ತೇದಾರರು ಬಲು ಬುದ್ಧಿಮಂತರೂ ಕಾರ್ಯದಕ್ಷರೂ ಆಗಿರುವರು. ಅವರನ್ನು ಮೋಸಗೊಳಿಸಿ ಕೆಲಸಮಾಡುವುದು ಅಸಾಧ್ಯವೆಂದೇ ನನಗೆ ತೋರಿಬರುತ್ತಿರುವುದು, ಆದರೂ ನಾವು ಆವ ಮಾರ್ಗವನ್ನಾದರೂ, ಅವಲಂಬಿಸಿ ಅವರ ಕೈಗೆ ಸಿಲುಕಿಕೊಳ್ಳದ ಹಾಗೆ ನೋಡಿಕೊಳ್ಳಬೇಕಾದುದು ಮೊದಲನೆಯ ಕರ್ತವ್ಯವು.

ಮಧು—ನಾನು ಅವರ ಕಣ್ಣಿಗೆ ಬೀಳದ ಹಾಗೆ ಎಚ್ಚರಿಕೆಯಿಂದ ಇರುವೆನು. ನನ್ನ ದುರದೃಷ್ಟಕ್ಕಾಗಿ ನಿನ್ನನ್ನು ಎಂದಿಗೊ

ಸಿಲುಕಿಸಲಾರೆನು. ನೀನು ಇನ್ನು ಮನೆಗೆ ತೆರಳು ; ನಾನು ನನ್ನ ಮುಂದಣ ಪರಿಣಾಮವನ್ನು ನೋಡಿಕೊಳ್ಳುವೆನು.

ಈ ಮಾತನ್ನು ಕೇಳಿದ ಸರೋಜಸುಂದರಿಯು ಬಲುಹೊತ್ತು ಆವಾವುದನ್ನೋ ಚಿಂತಿಸಿದ ಬಳಿಕ—ಮಹಾಶಯ ! ಅವರು ನಿನ್ನನ್ನು ಹೇಗಾದರೂ ಪತ್ತೆಮಾಡಿಬಿಡುವರು ಇದೊಂದೇ ನನಗೆ ಕೊರಗು, ಎಂದಳು.

ಮಧು—ಅವರು ನನ್ನನ್ನು ಕಂಡು ಹಿಡಿಯುವುದಕ್ಕೆ ಮೊದಲು ತುಂಬಾ ಶ್ರಮಪಡಬೇಕಾಗುವುದು. ನಾನು ಈಗಾಗಲೇ ಬೇಸತ್ತು ಹೋಗಿರುವೆನು ನಾನು ನಿರಪರಾಧಿಯಾಗಿಯೂ ಹೀಗೆ ಕೊರಗುತ್ತಿರಬೇಕೆಂದರೆ, ನನಗೆ ತಾನೇ ಸುಖವೇನು ? ನಾನು ಹೇಗಾದರೂ ಇವರ ಕಾಟದಿಂದ ಪಾರಾಗುವುದಕ್ಕೆ ಉಪಾಯಾಂತರ ವನ್ನು ಹುಡುಕಿಕೊಳ್ಳುವೆನು.

ಸರೋಜ—ಈ ರೂಪವನ್ನು ಮಾರ್ಪಡಿಸುವುದರಿಂದ ಕೊಂಚ ಮಟ್ಟಿಗೆ ಪ್ರಯೋಜನವಾದರೂ ಆಗಬಹುದು. ಮಹಾ ಶಯ ! ನೀನೂ ಚಿಂತಿಸಿ ನೋಡು.

ಮಧು—ಬೇರೊಂದು ರೂಪವನ್ನು ತಾಳುವುದಕ್ಕೆ ಯತ್ನ ವಿಲ್ಲ.

ಸರೋಜ—ನಿನ್ನಲ್ಲಿ ವೇಷಪರಿವರ್ತನೆಗೆ ಸಾಮಗ್ರಿಗಳಿರು ವುದಾದರೆ, ನಾನು ನಿನಗೆ ಬೇರೊಂದು ರೂಪವನ್ನು ಕಲ್ಪಿಸಿಕೊಡು ವೆನು. ಇದು ಸಾಧ್ಯವಾಗದ ಪಕ್ಷದಲ್ಲಿ, ಅವರು ನಿನ್ನನ್ನು ಎಂದಿಗೂ

ಪತ್ತೇಮಾಡದೆ ಬಿಡರು. ಅಂತಹ ಸಂದರ್ಭದಲ್ಲಿ, ನಾನು ಹೇಳು ವಂತೆ ನಡೆದುಕೊಳ್ಳುವುದಾಗಿ ನೀನು ನನಗೆ ಮಾತ ಕೊಡಬೇಕು ?

ಮಧು—ನಾನು ನಿನಗೆ ಮಾತ ಕೊಡಬೇಕೇ?

ಸರೋಜ—ಕೊಡಬೇಕು

ಮಧು—ಏನೆಂದು ಮಾತ ಕೊಡಲಿ?

ಸರೋಜ—ನೀನು ಅವರ ಕೈಗ ಸಿಕ್ಕಿ ಬೀಳುವುದಾದರೆ, ಅವರಿಗೆ ಪ್ರತಿಯಾಗಿ ಆಚರಿಸಲಾಗದು ನಮ್ಮ ವಿರುದ್ಧಾಚರಣೆ ಗಳಿಂದ, ಆಗುವ ಕೆಲಸವೂ ಕೆಟ್ಟು ಹಾಳಾಗಿ ಹೋಗುವುದು

ಮಧು—(ಸಂತಸಗೊಂಡು) ಸರೋಜ! ನೀನು ನನ್ನ ವಿಷಯದಲ್ಲಿ ಇಷ್ಟು ಆದರವನ್ನು ತೋರುತ್ತಿರುವೆ ನಿನ್ನ ಉಪ ಕಾರಕ್ಕೆ ನನ್ನ ಪ್ರತ್ಯುಪಕಾರವೇನು?

ಸರೋಜ—ನಿನ್ನ ದುರದೃಷ್ಟವೇ ನನ್ನನ್ನು ಪ್ರೇರಿಸುತ್ತಿರು ವುದು

ಮಧು—ನಾನು ದುರದೃಷ್ಟವಂತನೆಂಬುದರಲ್ಲಿ ಆವ ಸಂಶಯವೂ ಇರಲಾರದು.

ಸರೋಜ—ಮಹಾಶಯ! ಇದಕ್ಕಾಗಿ ನೀನೊಬ್ಬನೇ ಸಂಕಟಪಡಬೇಕಾದುದಿಲ್ಲ ನಿನ್ನಂತೆಯೇ ನಾನೂ ಅದೃಷ್ಟಹೀನೆಯು. ನಮ್ಮಿಬ್ಬರ ದೌರ್ಭಾಗ್ಯವೂ ಒಂದೇ ತೆರನಾಗಿರುವುದು. ನನಗೂ ಒಬ್ಬ ಗೂಢಶತ್ರುವು ಹುಟ್ಟಿಕೊಂಡು ಆವಾಗಲೂ ನನ್ನ ಬೆನ್ನಟ್ಟಿಯೇ ಇರುವನು. ಇದರಿಂದ ನನಗೂ ದಿಕ್ಕೇ ತೋರುತ್ತಿಲ್ಲ.

ಮಧು—ಸರೋಜ! ನಿನ್ನ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗುವುದು. ಇದಕ್ಕಾಗಿಯೇ ದೇವರು ನಮ್ಮಿಬ್ಬರನ್ನೂ ಒಟ್ಟು ಗೂಡಿಸಿದಂತಿದೆ ಅನಿಷ್ಟ ನಿವೃತ್ತಿಯಿಂದ ಇಷ್ಟಪ್ರಾಪ್ತಿಗೆ ಯತ್ನಮಾಡಿ ನೋಡುವ

ಸರೋಜ—ಇನ್ನು ನಾವು ಇಲ್ಲಿರುವುದು ಸರಿಯಲ್ಲ ನೀನು ಬೇಗನೆಯೇ ತಪ್ಪಿಸಿಕೊಳ್ಳುವುದಕ್ಕೆ ದಾರಿಯನ್ನು ಹುಡುಕಿಕೊಳ್ಳು

ಮಧು—ನಾನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳುವೆನು. ಇದು ನನಗೆ ಹೊಸದೇನೂ ಅಲ್ಲ, ಆದರೆ ನಿರ್ಭಯನಾಗಿ ಜೀವನ ಯಾತ್ರೆಯಲ್ಲಿ ಸಂಚಾರಮಾಡತಕ್ಕ ದಿನವು ಎಂದಿಗೆ ಬಂದೀತೆಂದು ನಾನು ಕಾಲವನ್ನು ನಿರೀಕ್ಷಿಸಿಕೊಂಡಿರುವೆನು.

ಸರೋಜ—ನಾವಿಬ್ಬರೂ ನಮ್ಮ ಇಬ್ಬರು ಶತ್ರುಗಳ ಕಣ್ಣುಗಳಿಗೆ ಮಣ್ಣು ತೂರಬೇಕಾಗಿರುವುದು ಇನ್ನಾದರೂ ನಾವಿಬ್ಬರು ಬೇರೆಬೇರೆಯಾಗುವ.

ಮಧು—ಒಂದು ಪ್ರಶ್ನೆ?

ಸರೋಜ—ಅದೇನು?

ಮಧು—ನಾನು ನನ್ನ ವೃತ್ತಾಂತವನ್ನು ಹೇಳಿದೆನು. ನೀನೂ ನನ್ನಂತೆಯೇ ಇರುವುದರಿಂದ, ನಿನ್ನ ಪೂರ್ವವೃತ್ತಾಂತವನ್ನು ಕೇಳಬೇಕೆಂಬ ಬಯಕೆಯು ನನ್ನನ್ನು ತವಕ ಗುಟ್ಟಿಸುತ್ತಿರುವುದು. ಸರೋಜ! ನಿನ್ನನ್ನು ನೋಡಿದಾಗಿನಿಂದಲೂ, ನಿನ್ನಲ್ಲಿ ನನಗೆ ಅನಿರ್ವಚನೀಯವಾದದೊಂದು ಅಭಿಮಾನವು ಜನಿಸಿರುವುದು.

ಸರೋಜ—ನನ್ನಲ್ಲಿ ನಿನಗೆ ಅಭಿಮಾನವಿರುವುದೇ?

ಮಧು—ಇರುವುದು, ಸರೋಜ!

ಸರೋಜ—ಅದಕ್ಕೆ ಕಾರಣವೇನು?

ಮಧು—ಕಾರಣವಿರುವುದು. ನೀನು ರೂಪವತಿ, ವಿದ್ಯಾವತಿ, ಬುದ್ಧಿಮತಿ; ನಿನ್ನ ವಯೋ ರೂಪ ವಿದ್ಯಾಬುದ್ಧಿಗಳಿಗೆ ಅ ಮಾನವಾದ ದಾಸೀವೃತ್ತಿಯನ್ನು ಅವಲಂಬಿಸಿ ಜೀವಿಸುತ್ತಿರುವೆ ಇದರಲ್ಲಿ ರಹಸ್ಯವೇನೋ ಅಡಗಿರಬೇಕು. ಆ ರಹಸ್ಯವನ್ನೇ ನಾನ ಅರಿಯಬೇಕೆಂದಿರುವುದು.

ಸರೋಜ—(ತಲೆಯನ್ನು ತಗ್ಗಿಸಿಕೊಂಡು) ರಹಸ್ಯ ವಿರವುದು.

ಮಧು—ಅದನ್ನು ನನಗೆ ತಿಳಿಸಲಾರೆಯಾ?

ಸರೋಜ—ಈಗಾಗಲಾರದು. ನಾವು ಮತ್ತೊಂದು ಸ ಸೇರುವೆವಷ್ಟೇ?

ಮಧು—ಸೇರುವುದಕ್ಕೆ ಅಡ್ಡಿಯೇನೂ ಇರಲಾರದು ಆದರೆ ಸೇರುವುದು ಮಟ್ಟಿಗೆ ಸಂಭವವೋ ಅಸಂಭವವೋ ಗೊತ್ತಾ ಲೊಲ್ಲದು.

ಸರೋಜ—ಕಾರಣವೇನು?

ಮಧು—ನಾನು ಗೂಢಶತ್ರುವಿನ ಹಾವಳಿಯನ್ನು ಒಂದೆ ತಡವೆಗೆ ತಪ್ಪಿಸಿಕೊಳ್ಳುವುದಕ್ಕಾಗಿ, ಬಲು ದೂರವಾಗಿ ಹೊರಟ

ಹೋಗಬೇಕೆಂದೆಣಿಸಿರುವೆನು. ನಾನು ಈ ಸಂಕಟವನ್ನು ಇನ್ನು ತಡೆಯಲಾರದವನಾಗಿರುವೆನು.

ಸರೋಜ—(ಚಿಂತಿಸಿ) ನನ್ನ ಚರಿತ್ರೆಯನ್ನು ಹೇಳುವುದಕ್ಕೆ ಈಗ ಸರಿಯಾದ ಕಾಲವಲ್ಲ. ನಾವು ಮುಂದೆ ಸೇರುವ ಸಂಭವವುಂಟು ಆಗ ನೋಡಿಕೊಳ್ಳುವ.

ಮಧು—ನನ್ನಲ್ಲಿ ಕೃಪೆಯಿಟ್ಟು ಈಗ ತಿಳಿಸಬಾರದೇ ?

ಸರೋಜ—ಹೊತ್ತಾದುದರಿಂದ, ಈಗಾಗಲಾರದು.

ಮಧು—ಮತ್ತೆ ನೀನು ಅಲ್ಲಿಗೆ ಹೋಗುವುದನ್ನು ನೋಡಿದರೆ ನನಗೆ ತುಂಬಾ ಸಂಕಟವಾಗುವುದು.

ಸರೋಜ—ಹಾಗೆಯೋ ?

ಮಧು—ಅಹುದು.

ಸರೋಜ—ಅದೇಕೆ ?

ಮಧು—ನಿನಗೂ ನನ್ನಂತೆಯೇ ತೊಂದರೆಗಳುಂಟಾಗಬಹುದು. ಬಲ್ಲವರಾರು ?

ಸರೋಜ—ನನಗೂ ತೊಂದರೆಯೇ ?

ಮಧು—ನಿನಗೂ ತೊಂದರೆ.

ಸರೋಜ—ಅದು ಹೇಗೆ ?

ಮಧು—ಅದನ್ನು ನಾನು ವಿವರಿಸಿ ಹೇಳಲಾರೆನು. ನೀನು

ರಾಜನಗರಕ್ಕೆ ಹೋಗಿ ಜೀವನವನ್ನು ಕಲ್ಪಿಸಿಕೊಳ್ಳುವುದಾದ ನಿನಗೆ ಒಳ್ಳೆಯದಾದೀತೆಂದು ನನಗೆ ನಂಬುಗೆ.

ಸರೋಜ—ನನ್ನ ರಹಸ್ಯವನ್ನು ಬಿಚ್ಚಿ ಹೇಳುವುದಾದ ನಾನು ರಾಜನಗರಕ್ಕೆ ಹೋಗಕೂಡದೆಂಬುದಕ್ಕೆ ಕಾರಣವು ತಾ ಗಿಯೇ ಗೊತ್ತಾಗುವುದು ಈಗ ನಾನು ರಹಸ್ಯವನ್ನಾದರೂ ಹೇ ಬಿಡಲೇ?

ಮಧು—ದಯೆಯಿಟ್ಟು ತಿಳಿಸಿದರೆ, ನಾನು ತುಂ ಸಂತೋಷಪಡುವೆನು

ಸರೋಜ—ಮಹಾಶಯ! ನಾನೂ ನಿನ್ನಂತೆಯೇ ಗೃ ವನ್ನೂ ದೇಶವನ್ನೂ ತ್ಯಾಗಮಾಡಿ ಬಂದಿರುವೆನು ಈಗ ನಾ ನನ್ನನ್ನು ಮರೆಮಾಡಿಕೊಂಡಿರುವೆನು ಈಗ ಇಷ್ಟನ್ನು ತಿಳಿ ಸಾಕು; ನಾವು ಇಷ್ಟರಲ್ಲಿಯೇ ಮತ್ತೆ ಸೇರುವ ಸಂಭವವುಂಟಾ ಬಹುದು. ಆಗ ಹೆಚ್ಚಿನ ರಹಸ್ಯವನ್ನು ತಿಳಿಯಪಡಿಸುವೆ ಕಾಲವು ಅತಿಕ್ರಮಿಸಿ ಬರುತ್ತಿರುವುದರಿಂದ ನಾನು ಹೊರಡ ಬೇಕಾಗಿರುವುದು. ನೀನು ಮಟ್ಟಿಗೆ ದೂರದಲ್ಲಿ ಕಾಣುವ ಕಾ ಹೋಗಿ ಅರ್ಧರಾತ್ರವಾಗುವ ವರೆಗೂ ಅಲ್ಲಿಯೇ ಅವಿತುಕೊಂಡಿ ಬಳಿಕ ರಾಜನಗರಕ್ಕೆ ಹೊರಟು ಹೋಗು ಈ ಸರಹದ್ದುಗಳಲ್ಲಿ ನೀನು ಸಂಚರಿಸುತ್ತಿರುವುದಾದರೆ, ಪತ್ತೇದಾರರ ಕೈಗೆ ಸಿ ಬೀಳುವ ದುರ್ಯೋಗವು ಉಂಟಾದರೂ ಉಂಟಾಗಬಹು ಇನ್ನು ನಾನು ತೆರಳುವೆನು; ನಿನಗೆ ಮಂಗಳವುಂಟಾಗಲಿ

ಮಧು—ಸರೋಜಸುಂದರಿ! ನಿನ್ನ ಉಪಕಾರಕ್ಕೆ ನಾ ಎಷ್ಟೋ ಕೃತಜ್ಞನಾಗಿರುವೆನು. ಮತ್ತೆ ನಿನ್ನನ್ನು ನೋಡುವ ಪುಣ್ಯ

ನನಗೆ ಲಭಿಸಲಿ. ನೀನು ಮಟ್ಟಿಗೆ ಯುಕ್ತಾಯುಕ್ತ ವಿವೇಚನೆ ಯಿಂದ ವರ್ತಿಸುತ್ತಿರು

ಸರೋಜ—ಮಹಾಶಯ ! ನೀನು ಮೊದಲು ಕಾಡಿಗೆ ಹೊರಟುಹೋದುದನ್ನು ನೋಡಿಕೊಂಡು ಬಳಿಕ ನಾನು ತೆರಳುವೆನು ಪತ್ತೇದಾರರ ಕೈಗೆ ನೀನು ಒಂದು ವೇಳೆ ಸಿಕ್ಕಿಬೀಳುವುದಾದರೆ, ಅವರಿಗೆ ಪ್ರತಿಯಾಗಿ ಆಚರಿಸದೆ ವಿಧೇಯನಾಗಿದ್ದುಕೊಂಡಿರು ; ಇದರಿಂದ ಪರಿಣಾಮದಲ್ಲಿ ಅನುಕೂಲತೆಯುಂಟಾಗಬಹುದು. ಲೋಕದಲ್ಲಿ ಸತ್ಯವೇ ಜಯಿಸುವುದಾದರೆ, ನಿನಗೂ ನನಗೂ ಪರಿ ಣಾಮದಲ್ಲಿ ಜಯವೇ ಉಂಟಾಗುವುದು.

ಮಧು—ನಾನು ನನ್ನ ಸರ್ವಸ್ವವನ್ನೂ ನಿನಗೆ ಅರ್ಪಿ ಸಿರುವೆನು.

ಸರೋಜ—ಇರಲಿ ; ನೀನು ಕಾಡಿಗೆ ತೆರಳು.

ಮಧುಮಾಧವನು ಆಕೆಯ ಇಷ್ಟದಂತೆ ಕಾಡಿನ ಕಡೆಗೆ ಹಿಂದೆ ಹಿಂದೆ ನೋಡುತ್ತಾ ಹೊರಟೇ ಹೋದನು. ಸರೋಜ ಸುಂದರಿಯು ಒಂದು ಕ್ಷಣಕಾಲ ಮಧುಮಾಧವನನ್ನು ಎವೆಯಿಕ್ಕದೆ ನೋಡುತ್ತಿದ್ದು, ತನ್ನ ಸೀರೆಯ ಸೆರಗಿನಿಂದ ಉಕ್ಕಿ ಬರುತ್ತಿದ್ದ ಕಂಬನಿಯನ್ನು ತೊಡೆದು ಕೊಳ್ಳುತ್ತಾ, ಆತನನ್ನು ಬಿಟ್ಟು ಹೋಗು ವುದಕ್ಕೆ ಕೊಂಚವಾದರೂ ಇಷ್ಟವಿಲ್ಲದವಳಾಗಿ ಯತ್ನವಿಲ್ಲದೆಯೇ ಹಿಂದಿರುಗಿ ತನ್ನ ಅಡುಗೂಳಜ್ಜಿಯ ಬಳಿಗೆ ಹೊರಟು ಬಂದಳು

---

## ನಾಲ್ಕನೆಯ ವಿಲಾಸ

### ಸ್ವರ್ಗದಲ್ಲಿ ನರಕ

ನಮ್ಮ ಕಥಾನಾಯಕನಾದ ಮಧುಮಾಧವನು ಕಾಡಿಗೆ ಹೋಗಿ ಅದೊಂದು ಮರದ ನೆಳಲಿನಲ್ಲಿ ಕುಳಿತುಕೊಂಡು ಪರಿಪರಿಯಾಗಿ ಚಿಂತಿಸಿದನು :—

"ನನಗೆ ಸರೋಜಸುಂದರಿಯ ಪರಿಚಯವಾದುದು ಅಪೂರ್ವ ಪುಣ್ಯೋದಯವೇ ಸರಿ. ನನ್ನ ಜನ್ಮದಲ್ಲಿ ಇಂತಹ ಸುಂದರಿಯನ್ನು ನಾನು ಎಂದಿಗೂ ನೋಡಿದವನೇ ಅಲ್ಲ. ಆಕೆಯ ನಡೆನುಡಿಗಳಾದರೋ ಎಂತಹವನನ್ನಾದರೂ ಆಕರ್ಷಿಸಿಯೇ ಬಿಡುವುವು ಇಂತಹ ಸುಂದರಿಗೆ ನನ್ನಲ್ಲಿ ಇದೆಂತಹ ಅನುರಾಗ—ಇಲ್ಲ, ಇಲ್ಲ; ಅಭಿಮಾನ ವುಂಟಾಗಿರುವುದು? ಅವಳ ಜೀವಿತರಹಸ್ಯವಾದರೂ ಏನಿರಬಹುದು? ಇದನ್ನು ನಾನು ಹೇಗೆ ಅರಿಯಲಿ?"

ಮಧುಮಾಧವನು ಹೀಗೆಲ್ಲಾ ಚಿಂತಿಸುತ್ತಾ ಕಾಡಿನ ಮಧ್ಯಕ್ಕೆ ಹೋಗಿ ಅಲ್ಲೊಂದು ಪ್ರದೇಶದಲ್ಲಿದ್ದುಕೊಂಡು ರಾತ್ರಿಯಾಗುವುದನ್ನೇ ಇದಿರು ನೋಡುತ್ತಿದ್ದನು.

ಅಷ್ಟು ಹೊತ್ತಿಗೆ ಸರಿಯಾಗಿ ಹಿಂದಣಿಂದ ಆರೋ ಬರುತ್ತಿರುವ ಶಬ್ದವು ಕೇಳಿಬರಲು, ಮಧುಮಾಧವನು ತಟ್ಟನೆ ಬೆಚ್ಚಿ ಬೆದರಿದವನಾಗಿ ಹಿಂದಿರುಗಿ ನೋಡಿದನು ಅಷ್ಟೆನ್ನುವುದರೊಳಗಾಗಿ ಇಬ್ಬರು ಮಧುಮಾಧವನ ಹತ್ತಿರ ಬಂದು ನಿಂತರು ಇವರಿಬ್ಬರೂ ತನ್ನನ್ನೇ ಅರಸಿಕೊಂಡು ಬಂದಿರಬಹುದೆಂದು ಮಧುಮಾಧವನು ಆಲೋಚಿಸಿದ ಕೂಡಲೆ, ಅವನ ಹೃದಯದಲ್ಲಿ ಉಂಟಾದ ಭಾವವನ್ನು ವರ್ಣಿಸುವುದಕ್ಕೆ ನಮ್ಮ ಭಾಷಾಪ್ರಪಂಚದಲ್ಲಿ ಸಾಕಾದಷ್ಟು

ಶಬ್ದಗಳೇ ಸಿಕ್ಕುವುದಿಲ್ಲ. ಮಧುಮಾಧವನು ಅವರನ್ನು ಕಂಡ ಕೂಡಲೆ ಎದ್ದು ನಿಂತನು ಅವನಿಗೆ ಓಡಿಹೋಗುವುದಕ್ಕೂ ಅಲ್ಲಿಯೇ ಇರುವುದಕ್ಕೂ ದಿಕ್ಕೇ ತೋರಲಿಲ್ಲ. ಇಷ್ಟಾದರೂ ಆತನು ಬಲಾಢ್ಯನಾದ ಯುವಕನಾದುದರಿಂದ, ಇಬ್ಬರಿಗೆ ಅಂಜತಕ್ಕ ಸ್ವಭಾವದವನಾಗಿರಲಿಲ್ಲ. ಅದು ಕಾರಣ ಆತನು ಒಂದು ಕೈ ನೋಡೋಣವೆಂದೇ ಎಚ್ಚರಿಕೆಯಿಂದ ಎದ್ದು ನಿಂತುದು ಆಗ ಆತನ ಮನದಲ್ಲಿ ಉಂಟಾದ ಆಲೋಚನೆಯೇನೆಂದರೆ—

"ಇವರಿಬ್ಬರೂ ದಾರಿಹೋಕರಿರಬಹುದೇ? ಇವರು ಇಲ್ಲಿಗೆ ಬಂದಿರುವುದು ಸ್ವಕಾರ್ಯಕ್ಕಾಗಿಯೇ—ಇಲ್ಲವೆ, ಪರಕಾರ್ಯಕ್ಕಾಗಿಯೇ? ಇವರು ನಿಷ್ಕಾರಣವಾಗಿ ಈ ಕಾಡಿಗ ಇಷ್ಟು ಹೊತ್ತಿನಲ್ಲಿ ಬಂದಿರಬಹುದೇ? ಇಲ್ಲ, ಇಲ್ಲ

ಪತ್ತೇದಾರರಿಬ್ಬರು ನನ್ನ ಬೆನ್ನಟ್ಟಿರುವರೆಂದು ನನಗೆ ತಿಳಿದು ಬಂದಿರುವುದು ಇವರೇನಾದರೂ ಪತ್ತೇದಾರರಾಗಿರಬಹುದೇ? ಇದ್ದರೂ ಇರಬಹುದು. ನಾನು ಇವರೊಡನೆ ಹೋರಾಡಿ ತಪ್ಪಿಸಿಕೊಂಡು ಮಾಯವಾಗಿ ಹೋಗಲೇ? ಇಲ್ಲವೇ, ಸರೋಜಸುಂದರಿಯ ಪ್ರಾರ್ಥನೆಯಂತೆ ಇವರಿಗೆ ಪ್ರತಿಯಾಗಿ ಆಚರಿಸದೆಯೇ ಬಾಯಮುಚ್ಚಿಕೊಂಡು ಕಾರಾಗಾರಕ್ಕೆ ತೆರಳಲೇ? ಈ ಸಂದರ್ಭದಲ್ಲಿ ಏನ ಮಾಡುವುದಕ್ಕೂ ಬುದ್ಧಿಯು ಹಾಯುವ ಹಾಗೆಯೇ ಇಲ್ಲ. ಹೀಗೆಲ್ಲಾ ಆಲೋಚಿಸುತ್ತಾ ಕುಳಿತು ಅಧೀರನಾಗುವುದಕ್ಕಿಂತಲೂ, ದೇವರ ಮೇಲೆ ಭಾರಹಾಕಿ ಕಾಲೋಚಿತವಾಗಿ ನಡೆವುದೇ ಮೇಲು"

ಇಷ್ಟರಲ್ಲಿ ಒಬ್ಬಾತನು ಮಧುಮಾಧವನನ್ನು ಕುರಿತು— ಮಹಾಶಯ! ತಾವು ಹೊಸಬರಾಗಿ ಕಾಣಿಸಿಕೊಳ್ಳುವುದರಿಂದ,

ತಮಗೆ ಈ ಕಾಡಿನಲ್ಲಿ ದಾರಿ ತಪ್ಪಿದಂತೆ ತೋರುವುದು, ಎಂದು ಹೇಳುತ್ತಾ ಹತ್ತಿರಕ್ಕೆ ಬರುವುದರಲ್ಲಿದ್ದನು. ಮಧುಮಾಧವನು, ಏನೋ ಅಪಾಯ ಬಂದಿತೆಂದು ತಿಳಿದು ಆತನನ್ನು ಒಂದೇ ಏಟಿಗೆ ಅಪ್ಪಳಿಸಿ ನೆಲದ ಮೇಲೆ ಉರುಳಿಸಿ ಬಿಟ್ಟನು. ಇದನ್ನು ನೋಡುತ್ತಿದ್ದ ಮತ್ತೊಬ್ಬನು ರೇಗಿದವನಾಗಿ ತನ್ನ ದೊಣ್ಣೆಯಿಂದ ಮಧುಮಾಧವನ ತಲೆಯ ಮೇಲೆ ರಪ್ ಎಂದು ಒಂದು ಬಲವಾದ ಪೆಟ್ಟನ್ನು ಕೊಟ್ಟನು. ಇದನ್ನು ತಡೆಯಲಾರದೆ, ಮಧುಮಾಧವನು ಜ್ಞಾನ ತಪ್ಪಿ ನೆಲದ ಮೇಲೆ ಬಿದ್ದು ಬಿಟ್ಟನು ಆತನಿಗೆ ಜ್ಞಾನೋದಯವಾಗಿ ಸುತ್ತಲೂ ನೋಡುವಷ್ಟರೊಳಗಾಗಿ, ಅವನ ಕೈಗಳಿಗೆ ಕೋಳವು ತೊಡಿಸಲ್ಪಟ್ಟದ್ದಿತು. ಮಧುಮಾಧವನು ಇದನ್ನು ನೋಡಿ, ತನ್ನ ಆಟವು ಮುಗಿಯಿತೆಂದು ತಿಳಿದು ಸುಮ್ಮನಾಗಿ ಬಿಟ್ಟನು

ಈ ಆಗಂತುಕರಿಬ್ಬರೂ ಮಧುಮಾಧವನನ್ನು ಹಿಡಿಯುವುದಕ್ಕಾಗಿಯೇ ಹೊರಟಿದ್ದ ಪತ್ತೇದಾರರು. ಇವರಲ್ಲಿ ಮೊದಲು ಪೆಟ್ಟುತಿಂದು ನೆಲಕ್ಕುರುಳಿದವನು ಪರಂತಪನೆಂಬುವನು; ಮಧುಮಾಧವನನ್ನು ದೊಣ್ಣೆಯಿಂದ ಹೊಡೆದು ಕೆಡಹಿದವನು ಅನಂತರತ್ನನೆಂಬುವನು. ಮಧುಮಾಧವನು ಚೇತರಿಸಿಕೊಂಡು ಎದ್ದು ಕುಳಿತಾಗ, ಪರಂತಪನು ಅವನನ್ನು ಕುರಿತು—ಎಲೋ ಮಗು! ನಿನ್ನ ಮುಷ್ಟಿಯಲ್ಲಿ ಒಳ್ಳೆಯ ಶಕ್ತಿಯಿರುವುದು. ನಿನ್ನ ಮುಷ್ಟಿಯಿಂದ ನಮಗೆ ಪೆಟ್ಟು ಬಿದ್ದರೂ ಚಿಂತೆಯಿಲ್ಲ; ನೀನು ಕೈಗೆ ಸಿಕ್ಕಿ ನಮ್ಮ ಉದ್ದೇಶವು ನೆರವೇರಿದುದಕ್ಕಾಗಿ ನಮಗೆ ತುಂಬಾ ಸಂತೋಷವು, ಎಂದನು.

ಮಧು—ನೀವಾರು-ಕಳ್ಳರೇ?

ಅನಂತರತ್ನನು ಪರಂತಪನನ್ನು ಕುರಿತು—ನೋಡು, ಮಹಾಶಯ! ಅಪರಾಧವನ್ನು ಮಾಡಿ ಎಷ್ಟು ಶಾಂತತೆಯಿಂದ ಮಾತನಾಡಿಸುವನು! ಎಂದನು.

ಮಧು—ಅಪರಾಧಿಯೇ? ಅಪರಾಧಿಯು ನಾನಲ್ಲ.

ಅನಂತ—ಅಯ್ಯೋ ಪಾಪ! ನೀನು ಅಪರಾಧಿಯಲ್ಲವೆಂಬುದು ನಮಗೂ ಗೊತ್ತು. ನೀನು ವೇಷವನ್ನು ಮಾರ್ಪಡಿಸಿಕೊಂಡವನೇ ಅಲ್ಲ; ನಿನ್ನಲ್ಲಿ ಕಳುವಿನ ಮಾಲಂತೂ ಇಲ್ಲವೇ ಇಲ್ಲ. ಎಲಾ! ಈ ಚಾತುರ್ಯವನ್ನು ಆರಲ್ಲಿ ತೋರುವೆ? ಅಂತೂ ನೀನು ಸಿಕ್ಕಿದೆಯಲ್ಲಾ! ಇಂದು ನಾವು ಕೃತಕೃತ್ಯರಾದೆವು.

ಈ ಮಾತನ್ನು ಕೇಳಿ ಮಧುಮಾಧವನು ತನ್ನ ವೇಷ ಪರಿವರ್ತನೆಗಾಗಿ ನೊಂದು ಕೊಂಡವನಾದರೂ, ಕಳುವಿನ ಮಾಲು ತನ್ನಲ್ಲಿಲ್ಲದಿರುವುದರಿಂದ, ಅಪರಾಧವು ತನ್ನ ಮೇಲೆ ಹೊರಲಾರದೆಂದು ತನ್ನಲ್ಲಿ ತಾನೇ ಸಮಾಧಾನವನ್ನು ತಂದುಕೊಂಡನು ಆದರೆ ಮುಂದಾಗುವುದನ್ನು ಆರು ತಾನೇ ಬಲ್ಲವರಾಗಿರುವರು?

ಪತ್ತೇದಾರರು ಮಧುಮಾಧವನನ್ನು ಶೋಧಿಸುವುದಕ್ಕೆ ಮೊದಲು ಮಾಡಿದರು ಆತನಲ್ಲಿ ಕಳುವಿನ ಮಾಲಾಗಲೀ, ಹಣವಾಗಲೀ, ಯೋಗನಾರಾಯಣನಿಗೆ ಸಂಬಂಧಿಸಿದ ಮತ್ತಾವ ಪದಾರ್ಥವೇ ಆಗಲೀ ಒಂದೂ ಸಿಕ್ಕದಿರಲು, ಅನಂತರತ್ನನು ಖಿನನಾದರೂ ಎದೆಗೆಡದೆ—ಪರಂತಪ ಮಹಾಶಯ! ಈ ಚತುರನಾದ ಚೋರನು ಎಷ್ಟು ಬೇಗನೆ ಕದ್ದ ಮಾಲನ್ನು ಅವಿತಿಟ್ಟುಬಿಟ್ಟಿರುವನು! ಈತನು ತುಂಬಾ ಅನುಭವದಾರನಾದ ಕಳ್ಳನಾಗಿಯೇ ಇರಬೇಕು.

ಇಲ್ಲದಿದ್ದರೆ ಹೊಸಬನಿಗೆ ಇಷ್ಟುದೂರ ಬುದ್ಧಿಯು ಹಾಯುವುದೆಂತು? ಎಂದು ನುಡಿದನು.

ಮಧು—ಮಹಾಶಯರಿರಾ! ಕೊಂಚ ಹೊತ್ತು ನನ್ನ ಮಾತನ್ನು ಆಲಿಸಿ ಕೇಳುವುದಾದರೆ, ನೀವು ಮಾಡಿರುವುದು ಎಂತಹ ತಪ್ಪೆಂಬುದು ನಿಮಗೇ ಗೊತ್ತಾಗುವುದು.

ಅನಂತ—ನಾವು ಅಪರಾಧಿಗಳನ್ನು ಕಂಡು ಹಿಡಿಯುವಾಗಲೆಲ್ಲಾ ಇಂತಹ ತಪ್ಪುಗಳನ್ನೇ ಮಾಡುವೆವು.

ಮಧು—ಆದರೆ, ನಾನೆಂದಿಗೂ ಅಪರಾಧಿಯಲ್ಲ.

ಅನಂತ—ವೇಷವನ್ನು ಮಾರ್ಪಡಿಸಿ ಕೊಂಡಿರುವುದರ ಅರ್ಥವಾದರೂ ಏನು?

ಮಧು—ವೇಷಪರಿವರ್ತನೆಗೆ ಅರ್ಥವಿಲ್ಲವೆಂದರೇನು?

ಅನಂತ—ನೀನು ನಿನ್ನೆಯ ರಾತ್ರಿಯಲ್ಲಿ ವಿಲಾಸಪುರವನ್ನು ಬಿಟ್ಟು ಓಡಿ ಬಂದವನಲ್ಲವೇ?

ಮಧು—ಅಹುದು; ನಾನು ಓಡಿ ಬಂದೆನು.

ಅನಂತ—ಇವೆಲ್ಲವೂ ನಿನ್ನ ನಿರಪರಾಧಕ್ಕೆ ಸಾಕ್ಷಿಗಳಲ್ಲವೇ? ನೀನು ಅಪರಾಧಿಯಲ್ಲದಿದ್ದರೆ, ಈ ರೀತಿಯಲ್ಲಿ ವರ್ತಿಸಬೇಕಾದುದಕ್ಕೆ ಕಾರಣವೇನಿದ್ದಿತು?

ಮಧು—ನೀವು ಸಾಧನೆ ಮಾಡಬೇಕೆಂದಿರುವ ಅಪರಾಧವೇ ಅಪರಾಧವು; ಅದನ್ನು ಬಿಟ್ಟರೆ ಮತ್ತಾವ ಕಾರಣವೂ ಇರಕೂಡದೇನು?

ಅನಂತ—ಎಲಾ, ಹುಡುಗ! ಮಾತನಾಡುವುದಕ್ಕೆ ನೀನೇ ಅಧಿಕಾರಿಯೆಂದು ತಿಳಿಯಬೇಡ. ಕಳುವಾದ ಮಾಲನ್ನು ಎಲ್ಲಿ ಹೂತಿಟ್ಟಿರುವೆ? ಬೇಗನೆ ತಿಳಿಸು. ಇಲ್ಲವಾದರೆ ನಿನ್ನ ಪರಿಣಾಮವು ಶೋಚನೀಯವಾದೀತು

ಮಧು—ಕಳುವು ಮಾಲೆಂದರೇನೋ ಅದು ನನಗೆ ಗೊತ್ತೇ ಇಲ್ಲ.

ಅನಂತ—ನೀಚ! ತಪ್ಪು ಕೆಲಸ ಮಾಡಿ ಹಠ ಹಿಡಿದರೆ ಅದು ನಾಗೀತೇ? ಬೇಗನೆ ತೋರು

ಮಧು—ಆವ ಕೆಲಸಕ್ಕಾಗಿ ಹಠ ಹಿಡಿಯಬೇಕು?

ಅನಂತ—ಹಾಗಿಲ್ಲದ ಮೇಲೆ ಮಾಲನ್ನು ತೋರು. ಹಣವನ್ನು ಎಲ್ಲಿ ಹೂತಿಟ್ಟಿರುವೆ? ಅದನ್ನಾದರೂ ಹೇಳು.

ಮಧು—ಆವ ಹಣ?

ಅನಂತ—ಯೋಗನಾರಾಯಣನ ಕೋಠಿಗೆ ಬೆಂಕಿ ಹಾಕಿ ಆತನ ಪೆಟ್ಟಿಗೆಯಲ್ಲಿದ್ದ ಹಣವನ್ನು ನೀನು ಕದ್ದುದುಂಟಷ್ಟೇ? ಆ ಹಣ. "ಬೆಣ್ಣೆ ತಿಂದ ಬೆಕ್ಕಿನಂತೆ" ಏನನ್ನೂ ಅರಿಯದವನ ಹಾಗೆ ನಟನೆ ಮಾಡಬೇಡ, ಕಂಡೆಯಾ?

ಮಧು—ಮಹಾಶಯ! ನನ್ನ ಆಣೆಗೂ ಇದೊಂದನ್ನೂ ನಾನು ಅರಿಯೆ. ನಾನು ನಿಜವಾಗಿಯೂ ನಿರಪರಾಧಿ

ಅನಂತ—ಈ ಮಾತುಗಳಿಂದೇನೂ ಆಗಲಾರದು. ನೀನು ಅಪರಾಧಿಯೆನ್ನುವುದಕ್ಕೆ ನಮಗೆ ಸಾಕಾದಷ್ಟು ರುಜುವಾತಿರುವುದು.

ನೀನು ಯೋಗನಾರಾಯಣನ ಕೋರಿಯನ್ನು ಬಿಟ್ಟಂದಿನಿಂದಲೂ, ನಿನ್ನ ಒಂದೊಂದು ಚರ್ಯೆಯೂ ನಮ್ಮ ಗೋಚರಕ್ಕೆ ಬೀಳದೇ ಇಲ್ಲ. ನಿನ್ನ ಪೂರ್ವ ವೃತ್ತಾಂತವೆಲ್ಲವೂ ನಮಗೆ ಗೊತ್ತು. ನಿನ್ನ ವಂಶ ವೃಕ್ಷವೂ ನಮ್ಮಲ್ಲಿರುವುದು. ಹೀಗಿರುವಲ್ಲಿ ನೀನು ತಪ್ಪಿಸಿಕೊಳ್ಳ ಲಾಗಲಾರದು ಒಳ್ಳೆಯ ಮಾತಿನಿಂದ ಎಲ್ಲವನ್ನೂ ತಿಳಿಸಿಬಿಡು. ಕಳ್ಳತನ ಮಾಡಿರುವುದಲ್ಲದೆ, ಸುಳ್ಳನ್ನೂ ಹೇಳಿ ಇಬ್ಬಗೆಯ ಪಾಪಕ್ಕೆ ಗುರಿಯಾಗುವೆಯೇಕೆ?

ಮಧು—ವ್ಯರ್ಥವಾಗಿ ನನ್ನನ್ನು ಏತಕ್ಕಾಗಿ ಬಲಾತ್ಕಾರ ಪಡಿಸಿ ಕೊಲ್ಲುವಿರಿ? ನಾನು ಆವುದನ್ನೂ ಹೂತಿಟ್ಟಿಲ್ಲ. ಹಾಗೂ ಹೂತಿಡುವುದಕ್ಕೆ ನನ್ನಲ್ಲಿ ಆವುದೂ ಇಲ್ಲವೂ ಇಲ್ಲ ನಾನು ನಿರ ಪರಾಧಿ

ಅನಂತ—ಎಲಾ, ಮುಟ್ಠಾಳ! ನಮ್ಮ ಕಣ್ಣಿಗೆ ಮಣ್ಣೆ ರಚಿ ಪ್ರಯೋಜನವಿಲ್ಲ. ನಮಗೆ ಎಲ್ಲವೂ ಗೊತ್ತು.

ಮಧು—ಹಾಗಾದರೆ, ನಿಮಗೆ ಗೊತ್ತಿರುವುದೆಲ್ಲವೂ ತಪ್ಪಾದುದು ಕಾಲಕರ್ಮ ಸಂಯೋಗದಿಂದ ಈ ದುರ್ಘಟನಾ ದ್ವಯವು ಏಕಕಾಲದಲ್ಲಿಯೇ ನಡೆದಿರುವುದರಿಂದ, ಆವುದೋ ಅಪ ರಾಧಕ್ಕೆ ಆವುದನ್ನೋ ಕಾರಣವಾಗಿ ಮಾಡಿಕೊಂಡು ಆರನ್ನೋ ಶೂಲಕ್ಕೇರಿಸುವುದಾದರೆ, ನಿಮ್ಮನ್ನು ನಾವು ನ್ಯಾಯಪರರೆಂದು ಕರೆಯಬೇಕಲ್ಲವೇ! ನ್ಯಾಯಮಾರ್ಗವು ಬಲು ಚೆನ್ನಾಗಿರುವುದು! ಗುಂಪಿಗೆ ಹೇದರ ಬೇಕು, ಮಾಡುವುದೇನು!

ಪರಂತಪ—ಅನಂತರತ್ನ ಮಹಾಶಯ! ಈತನು ಬುದ್ಧಿ ಮಂತನಂತೆ ಮಾತನಾಡುವನು.

ಅನಂತ—ಅಪರಾಧಿಗಳು ಆವಾಗಲೂ ನಿರವರಾಧಿಗಳಿಗಿಂತಲೂ ಚೆನ್ನಾಗಿ ವಾದಿಸುವರು. ಈತನನ್ನು ನೋಡಿದರೇ ಗೊತ್ತಾಗುವುದಿಲ್ಲವೇ?

ಮಧು—ಮಹಾಶಯರಿರಾ! ನಾನು ಸತ್ಯವಾಗಿಯೂ ನಿರಪರಾಧಿಯು ನನ್ನನ್ನು ಏಕೆ ಗೋಳಗುಟ್ಟಿಸುವಿರಿ?

ಪರಂತಪ—ಅಯ್ಯಾ! ನೀನು ನಿಜವಾಗಿಯೂ ನಿರಪರಾಧಿಯೋ?

ಮಧು—ಅಹುದು, ಮಹಾಶಯ! ನಾನು ನಿರಪರಾಧಿ

ಪರಂತಪ—ನೀನು ಅದಕ್ಕೆ ರುಜುವಾತುಕೊಡಬಲ್ಲೆಯಾ?

ಮಧು—ಇಲ್ಲ, ಕೊಡಲಾರೆ

ಪರಂತಪ—ನಿನ್ನ ಮಾತೇ ನಮಗೆ ಪ್ರಮಾಣವಲ್ಲವೇ? ನಿಜವಾದ ಅಪರಾಧಿಗಳೂ ಹೀಗೆಯೇ ಸಾಧಿಸುವುದಾದರೆ, ಲೋಕದಲ್ಲಿ ಅಪರಾಧದ ಸುದ್ದಿಯೇ ಇಲ್ಲದಂತಾಗಿ ಹೋಗುವುದಿಲ್ಲವೇ? ರುಜುವಾತಿಲ್ಲದ ಬರಿಯ ಮಾತಿನಿಂದ ಪ್ರಯೋಜನವೇನು?

ಮಧು—ಮಹಾಶಯ! ಇತರರ ಮಾತು ನನಗೆ ಬೇಕಿಲ್ಲ ನಾನೇನೋ ನಿರಪರಾಧಿ. ನನ್ನ ಮಾತನ್ನು ನೀವು ಎಲ್ಲಿಯವರೆಗಾದರೂ ನಂಬ ಬಹುದು.

ಪರಂತಪ—ಮಗು! ಇಲ್ಲಿ ನೋಡು. ನಾವೂ ಭೂತದಯಾ ದಾಕ್ಷಿಣ್ಯಗಳಿಂದ ಕೂಡಿದ ಮನುಷ್ಯರೇ ಹೊರತು ಪಿಶಾಚರಲ್ಲ ನಮಗೂ ಯುಕ್ತಾಯುಕ್ತ ವಿವೇಚನೆಯೆಂಬುದುಂಟು.

ವ್ಯರ್ಥವಾಗಿ ಕಿರುಕುಳವನ್ನುಂಟುಮಾಡಿ ಇತರರನ್ನು ಕಾಡಬೇಕೆಂಬುದೇ ನಮ್ಮ ವ್ರತವಲ್ಲ. ನೀನು ವೇಷವನ್ನು ಈ ರೀತಿಯಾಗಿ ಮಾರ್ಪಡಿಸಿಕೊಂಡಿರುವುದಕ್ಕೆ ಕಾರಣವಾದರೂ ಏನು? ಹೇಳು. ಬರಿಯ ಸುಳ್ಳಿನಿಂದ ನಮ್ಮನ್ನು ವಂಚಿಸಬೇಡ, ಕಂಡೆಯಾ ?

ಮಧುಮಾಧವನು ಈ ಮಾತನ್ನು ಕೇಳಿ ತನ್ನ ಪೂರ್ವ ವೃತ್ತಾಂತವೆಲ್ಲವನ್ನೂ ಮೊದಲಿನಿಂದ ಕೊನೆಯ ವರೆಗೂ ತಿಳಿಸಿದನು ಅನಂತರತ್ನನು ಈ ಮಾತನ್ನು ಕೊಂಚವಾದರೂ ನಂಬಲಾರದವನಾಗಿ—ಎಲೋ ಹಗಲುಗಳ್ಳ ! ತಪ್ಪಿಸಿಕೊಳ್ಳುವುದಕ್ಕೆ ಪೋಣಿಸಿರುವ ಕಥೆಯು ಮನೋಹರವಾಗಿರುವುದು, ಆದರೆ ನಿನ್ನ ಬೇಳೆಯು ನಮ್ಮಲ್ಲಿ ಬೇಯುವುದಿಲ್ಲವಣ್ಣಾ ! ನಮಗೆ ಬೇಕಾದುದು ಕಳುವಿನ ಮಾಲು ಅದನ್ನು ಮೊದಲು ತೋರಿಸಿ ಬಿಟ್ಟು ಬಳಿಕ ಬೇಕಾದ ಹಾಗೆ ಮಾತನಾಡು ನಮ್ಮ ಕಾಲವು ಅಮೂಲ್ಯವಾದುದು, ಎಂದು ಪರಿಹಾಸದೊಡನೆ ಮಾತನಾಡಿದನು

ಮಧು—ನೀವು ಎಷ್ಟು ಬಗೆಯಲ್ಲಿ ಕೇಳಿದರೂ, ನನ್ನದು ಒಂದೇ ಉತ್ತರವು. ನಾನು ಕಳುವಿನ ಮಾಲನ್ನು ಕಂಡವನೂ ಅಲ್ಲ, ಅದನ್ನು ಹೂತಿಟ್ಟವನೂ ಅಲ್ಲ.

ಅನಂತ—ಮೊದಲಿನಿಂದ ಕೊನೆಯ ವರೆಗೂ ಇದೇ ನಿನ್ನ ಪಲ್ಲವಿಯೆಂದು ತೋರುವುದು.

ಮಧು—ನಾನು ಸತ್ಯವನ್ನೇ ನಂಬಿ ಸತ್ಯವನ್ನೇ ನುಡಿಯ ತಕ್ಕವನಾದುದರಿಂದ, ಈ ಪಲ್ಲವಿಯನ್ನಲ್ಲದೆ ಮತ್ತಾವ ಪಲ್ಲವಿಯನ್ನು ಹಾಡಲಿ?

ಅನಂತ—ಬುದ್ಧಿಯಿಲ್ಲದ ಹುಡುಗ! ನಾನು ನಿನಗಾಗಿ ಪಶ್ಚಾತ್ತಾಪ ಪಡಬೇಕಾಗಿರುವುದು. ನೀನು ಘೋರತರವಾದ ಅಪರಾಧವನ್ನು ಮಾಡಿ, ಈ ರೀತಿಯಾಗಿ ಅಪಲಪಿಸುವುದಾದರೆ, ಇದು ನಿನ್ನ ಪ್ರಾಚೀನ ಕರ್ಮದ ದೋಷವೇ ಸರಿ ನಮಗೆ ಸಿಕ್ಕಿರುವ ಸರಿಯಾದ ಪ್ರಮಾಣಗಳಿಂದ ನೀನೇ ಅಪರಾಧಿಯೆಂದು ಸಿದ್ಧಾಂತ ಮಾಡಿಕೊಂಡಿರುವೆವು ನಿನ್ನ ಗೂಢ ಶತ್ರುವು ಕೈಗೆ ಸಿಕ್ಕುವ ವರೆಗೂ ನೀನು ಎಷ್ಟೇ ನಿರಪರಾಧಿಯಾದರೂ ಅಪರಾಧಿಯೇ ಸರಿ. ನಿನ್ನ ಶತ್ರುವನ್ನು ಬಯಲು ಮಾಡುವುದೂ ಬಿಡುವುದೂ ನಿನ್ನ ಕೆಲಸವಾಗಿರುವುದು. ನಿನಗೆ ನೀನು ನಿರಪರಾಧಿಯಾಗಿರಬಹುದು, ಆದರೆ ನೀನು ಮಟ್ಟಿಗೆ ನಮಗೆ ಅಪರಾಧಿಯೇ ಸರಿ. ನಾವು ಅಪರಾಧಿಯನ್ನು ಬಿಟ್ಟುಕೊಟ್ಟು ತಿನ್ನುವ ಅನ್ನಕ್ಕೆ ಮಣ್ಣ ತೂರಿಕೊಳ್ಳತಕ್ಕವರಲ್ಲ. ಒಳ್ಳೆಯ ಮಾತಿನಿಂದ ಮಾಲನ್ನು ಕೊಟ್ಟುಬಿಡು; ಇದರಿಂದ ನಿನ್ನ ಶಿಕ್ಷೆಯು ಕಡಮೆಯಾದರೂ ಆಗಬಹುದು ನೀನು ಮೌನದಿಂದಲೇ ಇರುವುದಾದರೆ, ದಂಡವಿಧಾನದ ಪೂರ್ಣ ಫಲವನ್ನು ನೀನು ಅನುಭವಿಸಿಯೇ ತೀರಬೇಕಾಗುವುದು. ನಿನ್ನ ದೋಷದಿಂದಲೇ, ನೀನು ಯುವಕನಾಗಿ ಕಾರಾಗೃಹವನ್ನು ಪ್ರವೇಶಮಾಡಿ, ಬಳಿಕ ಮುದುಕನಾಗಿಯೇ ಕಾರಾಗೃಹದಿಂದ ಹಿಂದಿರುಗಿ ಬರಬೇಕಾದೀತು, ಎಚ್ಚರಿಕೆ!

ಮಧು—ಮಹಾಶಯ! ನಾನು ನಿರಪರಾಧಿಯೆಂಬುದಕ್ಕಿಂತಲೂ ಹೆಚ್ಚಾಗಿ ಹೇಳಲಾರದವನಾಗಿರುವೆನು.

ಅನಂತ—ನೀನು ಮನಸ್ಸುಮಾಡಿದರೆ ಹೇಳಬಲ್ಲೆ.

ಮಧು—ನಾನು ಆವುದನ್ನು ಹೇಳಬಲ್ಲೆನು?

ಅನಂತ—ಮಾಲನ್ನು ಎಲ್ಲಿ ಹುಗಿದಿಟ್ಟಿರುವೆಯೋ ಅದನ್ನು.

ಮಧು—ನಾನು ತಪ್ಪು ಮಾಡದಿದ್ದರೂ, ತಪ್ಪನ್ನು ಒಪ್ಪಿಕೊಳ್ಳಬೇಕೆಂದು ಹೇಳುವಿರಾ?

ಅನಂತ—ಅಹುದು.

ಮಧು—ಹಾಗಾದರೆ ನ್ಯಾಯವೆಲ್ಲಿ? ನ್ಯಾಯವಾದಿಗಳು ವಾದಿಸಿ ಆವುದನ್ನು ಸಿದ್ಧಾಂತ ಪಡಿಸಬೇಕು? ಆವುದಕ್ಕಾಗಿ ನ್ಯಾಯಸ್ಥಾನಗಳು ಏರ್ಪಟ್ಟಿರುವುವು? ಧರ್ಮಾವತಾರರು ತಮ್ಮ ಧರ್ಮಾಸನದ ಮೇಲೆ ಕುಳಿತುಕೊಂಡು ಮಾಡುವುದೇನು, ಮಹಾಶಯ? ನೀವೇ ಅನ್ಯಾಯದಲ್ಲಿ ಪ್ರವರ್ತಿಸುವಂತೆ ಪ್ರೇರಿಸುವುದಾದರೆ, ನಮ್ಮಂತಹ ಬಡಪಾಪಿಗಳು ಬದುಕುವ ಬಗೆ ಹೇಗೆ? ಸರಕಾರವು ಸತ್ಯಧರ್ಮಗಳನ್ನು ಸ್ಥಾಪಿಸುವುದರಲ್ಲಿ ಬದ್ಧ ಕಂಕಣವಾಗಿರುವಾಗ, ಅವರ ಉಪ್ಪನ್ನು ತಿಂದ ನೀವುಗಳು ಅಧರ್ಮವನ್ನೇ ಹೆಚ್ಚಿಸುವುದಾದರೆ, ಈ ದೋಷವು ಆರದು? ಲೋಕದಲ್ಲಿ ಸುಳ್ಳಿನ ಖ್ಯಾತಿಗಾಗಿ ನೀವು ಇಂತಹ ಕೆಲಸವನ್ನು ಮಾಡಬಹುದೇ? ಜಗನ್ನಿಯಾಮಕನು ಇನ್ನೂ ಬದುಕಿರುವನೇ—ಇಲ್ಲವೆ, ಸತ್ತು ಹೋಗಿರುವನೇ? ಅಧರ್ಮವು ಮೊದಲಲ್ಲಿ ಫಲಿಸಿದರೂ ಫಲಿಸಬಹುದು, ಆದರೆ ಧರ್ಮವೊಂದೇ ಪರಿಣಾಮದಲ್ಲಿ ಫಲಿಸುವುದೆಂಬುದನ್ನು ನೀವು ಇನ್ನೂ ಅರಿಯದಿರುವುದಕ್ಕಾಗಿ ನಾನು ತುಂಬಾ ವ್ಯಸನಪಡಬೇಕಾಗಿರುವುದು. ಅಕಟಕಟ! ಸರಕಾರದವರು ನಿಮ್ಮಂಥವರ ಕೈಯಲ್ಲಿ ಅಧಿಕಾರದ ಸೂತ್ರವನ್ನು ಕೊಟ್ಟು ಯೋಗ ನಿದ್ರೆಯಲ್ಲಿರುವರಲ್ಲಾ! ಹಾ ದೈವವೇ! ಇದೇನು ಕಲಿಪುರುಷನ ಮಹಿಮೆಯೇ?

ಇಲ್ಲವೇ, ಪ್ರಪಂಚ ವ್ಯವಹಾರದ ನೀತಿರೀತಿಗಳೇ ಈ ತೆರನಾದುವೇ? ನಾವು ಸತ್ಯೋದ್ಧಾರಕ್ಕಾಗಿ ಆರ ಮುಂದೆ ಬಾಯಬಿಟ್ಟು ಹಂಬಲಿಸಬೇಕು? ಹಾ ಭಗವಂತ! ನನ್ನ ಪಾಪಶೇಷಗಳಿಗೆ ಅನಂತ ಕಾಲದ ವರೆಗಾದರೂ ನರಕ ಯಾತನೆಯನ್ನೇ ಉಂಟುಮಾಡು, ಇದರಿಂದ ನನಗೆ ಆನಂದವೇ ಉಂಟು; ಆದರೆ ಜನ್ಮಜನ್ಮಾಂತರಕ್ಕೂ ಈ ಪ್ರಪಂಚದಲ್ಲಿ ಜನ್ಮವೆತ್ತುವುದಕ್ಕೆ ಆಸ್ಪದವನ್ನು ಮಟ್ಟಿಗೆ ದಯೆಪಾಲಿಸದಿರು ಇದೇ ನನ್ನ ಚರಮ ಪ್ರಾರ್ಥನೆ.

ಅನಂತ—ನಾಲಗೆಗೆ ಎಲ ಬಿಲ್ಲ; ಆರು ಹೇಗೆ ಬೇಕಾದರೂ ಮಾತನಾಡಬಹುದು ಎಲಾ ಮಗು!. ನಿನಗಾಗಿ ನಾನು ತುಂಬಾ ವ್ಯಸನಪಡುವೆನು

ಮಧು—ಮಹಾಶಯ! ನಾನು ನಿರಪರಾಧಿಯಾದುದರಿಂದ, ನೀವು ನನಗಾಗಿ ವ್ಯಸನಪಡುವಿರಲ್ಲವೇ? ಹೀಗಾಗುವುದೂ ದೈವೇಚ್ಛೆ.

ಅನಂತ—ಮಗನೇ, ಕೇಳು ನಿನ್ನನ್ನು ನಾವು ನ್ಯಾಯಸ್ಥಾನದಲ್ಲಿ ನಿಲ್ಲಿಸಿದ ಮೇಲೆ, ನಮ್ಮ ಯತ್ನವು ಮೀರಿ ಹೋಗುವುದು. ನಮ್ಮ ಯತ್ನದಲ್ಲಿರುವಾಗಲೇ, ನೀನು ಒಪ್ಪಿಕೊಂಡರೆ, ನಿನಗೆ ಅಲ್ಪವಾದ ಶಿಕ್ಷೆಯಾಗುವುದು ಇವೆರಡರಲ್ಲಿ ನಿನಗೆ ಆವುದು ಇಷ್ಟವೋ ಅದರಂತೆ ನಡೆಯಬಹುದು.

ಮಧು—ಅಧಿಕಾರವು ತಮ್ಮಲ್ಲಿರುವಾಗ, ತಮಗೆ ತೋರಿಬಂದಂತೆ ಆಚರಿಸಬಹುದು. ನಾನಾದರೋ ನಿರಪರಾಧಿಯೆಂದೇ ಸಾಧಿಸುವೆನು.

ಅನಂತ—ನ್ಯಾಯಸ್ಥಾನಗಳಲ್ಲಿ ನಿನ್ನ ಮಾತನ್ನು ಕೇಳುವವರಾರು ? ಪ್ರಮಾಣಕ್ಕೆ ಸಿಕ್ಕದ ಮಾತುಗಳು ಎಂದಿಗೂ ಗ್ರಾಹ್ಯವಾಗಲಿಕ್ಕಿಲ್ಲ.

ಮಧು—ಇರಬಹುದು.

ಅನಂತ—ಹಾಗಾದರೆ ಈ ಕೆಟ್ಟ ಹರವೇಕೆ?

ಮಧು—ಸತ್ಯದಿಂದಲೇ ವರ್ತಿಸಬೇಕೆಂದು ನನ್ನ ಹರವು.

ಅನಂತ—ಚೆನ್ನಾಗಿ ಆಲೋಚಿಸಿ ನೋಡು ; ದುಡುಕ ಬೇಡ. ಕೆಟ್ಟ ಹರವು ಮನುಷ್ಯನ ತಲೆಯನ್ನು ತಿನ್ನುವುದು.

ಮಧು—ಸತ್ಯವಾಗಿ ನುಡಿಯುವುದು ಕೆಟ್ಟ ಹರವಲ್ಲ ; ಅದು ಸಮಯದಲ್ಲಿ ತಲೆಯನ್ನು ಕಾಯುವುದು.

ಅನಂತ—ಬೇಡ, ಬೇಡ ; ತಲೆಗೆಟ್ಟಿಯೆಂದು ಕಲ್ಲ ಹಾಯ ಬೇಡ.

ಮಧು—ನಾನು ಸತ್ಯಕ್ಕಾಗಿಯೇ ಹುಟ್ಟಿರುವೆನು; ನಾನು ಸತ್ಯಕ್ಕಾಗಿಯೇ ಬದುಕುತ್ತಿರುವೆನು ; ನಾನು ಸತ್ಯಕ್ಕಾಗಿಯೇ ಪ್ರಾಣವನ್ನಾದರೂ ಬಿಡಲುಳ್ಳವನು. ಸತ್ಯಮಾರ್ಗದಲ್ಲಿರುವವನಿಗೆ ಆರ ಭಯವೇನಿರುವುದು ? ಭಗವಂತನು ಸತ್ಯಪರಾಯಣನಾಗಿ, ಪ್ರಪಂಚದಲ್ಲಿ ಸತ್ಯವೆಂಬುದು ಇರುವುದಾದರೆ, ನಾನು ಸತ್ಯವಾಗಿಯೂ ನಿರಪರಾಧಿ ! ನಿರಪರಾಧಿ !! ನಿರಪರಾಧಿ !!!

ಅನಂತ—ನೀನು ತುಟಿ ಮೀರಿದ ಹಲ್ಲಾಗಿರುವುದರಿಂದ ನಮ್ಮ ಮಾತನ್ನು ಕೇಳಲಾರೆ. ಇನ್ನು ನಮ್ಮ ಮಾರ್ಗವು ಸುಗಮ

ವಾಗಿರುವುದು. ನಿನ್ನನ್ನು ನಾವು ಕರ್ತವ್ಯಕ್ಕೆ ಅನುಸಾರವಾಗಿ ಕಾರಾಗೃಹಕ್ಕೆ ಕೊಂಡೊಯ್ಯುವೆವು ಬಳಿಕ ನೀನುಂಟು, ನ್ಯಾಯ ಸ್ಥಾನವುಂಟು, ಧರ್ಮಾವತಾರನುಂಟು 'ಮುಟ್ಟಿದುದಕ್ಕೆ ಮೂರು ಸಲ' ಎನ್ನುವಂತೆ ನಿನಗೆ ಮತ್ತೊಂದು ಸಲ ಅವಕಾಶ ವನ್ನು ಕೊಡುವೆವು ಈಗಳಾದರೂ ಮುಂದಣ ಪರಿಣಾಮದ ಕಡೆಗೆ ದೃಷ್ಟಿಯಿಟ್ಟು ಮಾತನಾಡು.

ಮಧು—ನಾನು ಸರ್ವಪ್ರಕಾರದಿಂದಲೂ ನಿರಪರಾಧಿ ನಿಮ್ಮ ಗುಡ್ಡ ಬೆದರಿಕೆಗೆ ನಾನು ಅಂಜತಕ್ಕವನಲ್ಲ. ಅನ್ಯಾಯ ಪ್ರಪಂಚದಲ್ಲಿ ಅನ್ಯಾಯವಾಗುವುದೆಂದು ಅದೇಕೆ ವ್ಯಸನಪಡಬೇಕು? ಆಗಬೇಕಾದುದೆಲ್ಲ ಆಗಿಯೇ ಹೋಗಲಿ

ಅನಂತ—ಇದೇ ನಿನ್ನ ಕೊನೆಯ ಉತ್ತರವಷ್ಟೇ?

ಮಧು—ಅಹುದು, ಇದೇ ಕೊನೆಯ ಉತ್ತರ.

ಅನಂತ—ಅವ ಗಲಭೆಗೂ ಆಸ್ಪದ ಕೊಡದೆ, ನಮ್ಮೊಡನೆ ಹೊರಟು ಬರಬೇಕು ಮಧ್ಯಮಾರ್ಗದಲ್ಲಿ ನಿನ್ನ ಕಲಿತ ಬುದ್ಧಿ ಯನ್ನು ತೋರುವುದಾದರೆ, ನಿನ್ನ ಮೂಳೆಯನ್ನು ಪುಡಿಪುಡಿ ಮಾಡಿ ಬಿಡುವೆವು, ಎಚ್ಚರಿಕೆ!

ಮಧು—ಮಹಾಶಯರೇ! ನೀವುಗಳು ಬರುವುದಕ್ಕೆ ಮೊದಲು ನನಗೆ ಆ ದುರ್ಬುದ್ಧಿಯಿದ್ದಿತು ಈಗ ನಾನು ನ್ಯಾಯಕ್ಕೆ ಹೋರಾಡಿ ನೋಡುವೆನು ಈ ಪ್ರಪಂಚದಲ್ಲಿ ನ್ಯಾಯವೇ ಸಿಕ್ಕುವು ದಿಲ್ಲವೆಂದು ಸಿದ್ಧಾಂತವಾದ ಮೇಲೆ, ಮುಂದಣ ಮಾರ್ಗವು ಗೊತ್ತೇ ಇರುವುದು. ನ್ಯಾಯಸ್ಥಾನದಲ್ಲಿ ನ್ಯಾಯವನ್ನು ಸಿದ್ಧಾಂತಪಡಿಸು

ವುದಕ್ಕಾಗಿ ನೀವು ನನ್ನನ್ನು ಕರೆದುಕೊಂಡು ಹೋಗುತ್ತಿರುವಲ್ಲಿ, ನಾನು ನಿಮ್ಮೊಡನೆ ಅನ್ಯಾಯವಾಗಿ ಹೋರಾಡುವುದು ಯುಕ್ತವಾಗಿಲ್ಲ. ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋದರೂ, ನಾನು ಬಾಯಿ ಮುಚ್ಚಿಕೊಂಡು ಅಲ್ಲಿಗೆ ಬರುವವನಾಗಿರುವೆನು. ದುರ್ದೈವದ ವಿಚಿತ್ರ ಘಟನಾ ವಿಶೇಷವನ್ನು ಕುರಿತು ಅಚ್ಚರಿ ಪಡಬೇಕಾಗಿರುವುದು.

ಇಲ್ಲಿಯ ವರೆಗೂ ಅನಂತರತ್ನ ಮಧುಮಾಧವರಿಗೆ ನಡೆದ ಸಂಭಾಷಣೆಯನ್ನು ಕಿವಿಯಾರೆ ಕೇಳುತ್ತಿದ್ದ ಪರಂತಪನು, ಹುಡುಗನಾಡುವ ಮಾತಿನಲ್ಲಿ ಬೆಲೆಯಿರುವುದೆಂದು ತನ್ನೊಳಗೆ ತಾನೇ ಆಲೋಚಿಸಿದ ಬಳಿಕ ಮಧುಮಾಧವನನ್ನು ಕುರಿತು ಇಂತೆಂದನು —

" ಮಗು ! ನಿನ್ನನ್ನು ಅಪರಾಧಿಯೆಂದು ಸಾಧನೆ ಮಾಡಿ ನಮಗಾಗುವುದೇನು ? " ಸರ್ವೇ ಜನಾಃ ಸುಖಿನೋ ಭವಂತು," ಎನ್ನುವುದೇ ನಮ್ಮ ಕಾರ್ಯಕ್ರಮದ ಮೂಲಮಂತ್ರವು. ನಿನ್ನ ಮನೋದಾರ್ಢ್ಯವನ್ನು ಅರಿವುದಕ್ಕಾಗಿಯೇ ನಮ್ಮ ಮಿತ್ರಮಹಾಶಯರು ನಿನ್ನೊಡನೆ ಈ ರೀತಿಯಾಗಿ ವಾದಿಸಿದರು. ಇದಕ್ಕಾಗಿ ನೀನು ಬೇಸರಪಡಬೇಕಾದುದೇನೂ ಇರುವುದಿಲ್ಲ. ನೀನು ನಿರಪರಾಧಿಯಾಗಿ ಬಾಳಬೇಕೆಂಬುದೇ ನಮ್ಮ ಆಂತರ್ಯದ ಅಭಿಲಾಷೆಯು. ಇದಕ್ಕಾಗಿ ನಾನು ನಿನ್ನನ್ನು ಮತ್ತೊಂದು ದಿನ ಕಂಡುಕೊಂಡು ವಿಷಯವೆಲ್ಲವನ್ನೂ ಆದ್ಯೋಪಾಂತವಾಗಿ ಜಿಜ್ಞಾಸೆ ಮಾಡುವೆನು. ಆಗ ನೀನು ಹೇಳುವುದು ನನಗೆ ನಿಜವೆಂದು ತೋರಿ ಬರುವುದಾದರೆ, ನಿನ್ನ ಗೂಢ ಶತ್ರುವಿನ ಅನ್ವೇಷಣದಲ್ಲಿ ನಾನೇ ಮುಂದಾಳಾಗಿ ನಿಲ್ಲುವೆನು. ನಾನು ಆತನನ್ನು ಹೇಗಾದರೂ ಮಾಡಿ ಕಂಡು ಹಿಡಿದು, ನಿನ್ನ ಸತ್ಯಸಂಧತೆಯನ್ನು ಲೋಕಕ್ಕೆಲ್ಲಾ ಬೀರುವೆನು. ನೀನು ಹೇಳುವು

ದೆಲ್ಲವೂ ಸುಳ್ಳಾದರೆ, ನಿನ್ನ ಉತ್ತಾರಣೆಯು ಅಪರಿಹಾರ್ಯ ವಾದುದು.

ಮಧುಮಾಧವನು ಈ ಮಾತನ್ನು ಕೇಳಿ ಕೊಂಚಮಟ್ಟಿ ಉತ್ಸಾಹಗೊಂಡವನಾಗಿ—ಮಹಾಶಯ! ತಾವು ಧೈರ್ಯವಾ ನಂಬೋಣವಾಗಲಿ. ನಾನು ನಿರವರಾಧಿ, ಎಂದು ಗಂಭೀರಭಾ ದಿಂದ ನುಡಿದನು

ಪರಂತಪ—ಮಗು! ಪ್ರಮಾಣದ ಮಾತು ಹಾಗಿರಲಿ ನಿನ್ನ ಮನೋಭಾವವನ್ನೂ, ಆಕಾರ ಪ್ರಕಾರಗಳನ್ನೂ, ಮಾತಿನ ಧೈರ್ಯಗಾಂಭೀರ್ಯಗಳನ್ನೂ ನೋಡಿದಲ್ಲಿ, ನೀನು ನಿರಪರಾ ಯೆಂದು ನನಗೆ ತೋರಿಬರುತ್ತಿರುವುದು ಈ ವಿಷಯದಲ್ಲಿ ನನ ದೊಂದು ಮಾತನ್ನು ಕೇಳಿ ಕೆಲಸಮಾಡು ನಾನು ನಿನಗೆ ಅಪ್ಪ ಕೊಡುವ ವರೆಗೂ ನೀನು ಆರೊಡನೆಯೂ ನಿನ್ನ ಗೂಢ ಶತ್ರುವಿ ಹೆಸರನ್ನೆತ್ತಿ ಮಾತನಾಡದಿರು ಒಂದು ವೇಳೆ ನೀನು ಆತನ ಹೆ ರೆತ್ತಿ ಮಾತನಾಡುವುದಾದರೆ, ನಾನು ಬೀರುವ ಮಾಯಾಜಾಲದ ಆತನು ಸಿಕ್ಕಿ ಬೀಳದೆ ಹೋದಾನು ಇದು ಮಟ್ಟಿಗೆ ಚೆನ್ನಾಗಿಯ ಜ್ಞಾಪಕದಲ್ಲಿರಲಿ.

ಅನಂತರತ್ನನು ಪರಂತಪನಾಡಿದ ಮಾತನ್ನು ಕೇಳಿ ತಿರಸ್ಕಾ ಭಾವದಿಂದ ಆತನನ್ನು ಒಂದು ತಡವೆ ನೋಡಿ ಆವ ಮಾತನ ಆಡದೆ ಸುಮ್ಮನಾಗಿ ಬಿಟ್ಟನು ಕಾರಣವೇನೆಂದರೆ—ಪರಂತಪ ಎಲ್ಲಾ ವಿಷಯದಲ್ಲಿಯೂ ಅನಂತರತ್ನನಿಗಿಂತಲೂ ಅತಿಶಯವಾ ಲೋಕಾನುಭವವನ್ನು ಸಂಪಾದಿಸಿ ವಿವೇಕಶಾಲಿಯೆಂದು ಲೋ ದಲ್ಲಿ ಖ್ಯಾತಿಯನ್ನು ಪಡೆದುಕೊಂಡಿದ್ದನು.

ಈ ಇಬ್ಬರು ಅಧಿಕಾರಿಗಳೂ ಮಧುಮಾಧವನನ್ನು ಯಥಾ ಸಮಯದಲ್ಲಿ ವಿಲಾಸಪುರಕ್ಕೆ ಕರೆತಂದು ಅಲ್ಲಿಯ ಕಾರಾಗಾರದಲ್ಲಿ ನಿರ್ಬಂಧ ಪಡಿಸಿಟ್ಟರು

---

## ಐದನೆಯ ವಿಲಾಸ

### ಅನೇಕ ಕಾರಣ ಕಥೆಗಳು

ಪತ್ತೇದಾರರಿಬ್ಬರೂ ಮಧುಮಾಧವನನ್ನು ಕಾರಾಗೃಹದಲ್ಲಿ ಭದ್ರಪಡಿಸಿ ತಮ್ಮ ತಮ್ಮ ಕೆಲಸದ ಮೇಲೆ ಹೊರಟು ಹೋದ ಕೊಂಚಕಾಲದ ಅನಂತರಗಲ್ಲ, ಮಧುಮಾಧವನು ಗ್ರಂಥಾರಂಭ ದಲ್ಲಿ ಉಕ್ತವಾಗಿರುವಂತೆ ಪರಿಪರಿಯಾಗಿ ಹಂಬಲಿಸಲಾರಂ ಭಿಸಿದನು

ಇಷ್ಟಾದರೂ ಮಧುಮಾಧವನು ಎದೆಗೆಟ್ಟವನಾಗಲಿಲ್ಲ ಆತನು ತನ್ನ ಗೂಢ ಶತ್ರುವಿನ ಹಾವಳಿಯಿಂದ ಪರಿಪರಿಯಾಗಿ ನಷ್ಟ ಪಟ್ಟಿದ್ದನು ; ಇದಕ್ಕಾಗಿಯೇ ಆತನು ಹೆದರಿದುದು ವಿಪತ್ತು ನಖಮುಖದಲ್ಲಿಯೂ ಆವರಿಸಿಕೊಂಡು ಬಂದ ವೇಳೆಗಳಲ್ಲಿ, ಇದಿ ನಲ್ಲಿ ನಿಂತು ಧೈರ್ಯದಿಂದ ಹೋರಾಡುವುದರಲ್ಲಿ ನಮ್ಮ ಮಧು ಮಾಧವನನ್ನು ಬಿಟ್ಟರೆ ಬೇರೊಬ್ಬರು ಅತಿ ವಿರಳರು.

ಇಂತಹ ಧೈರ್ಯಶಾಲಿಯಾದ ಮಧುಮಾಧವನು ಮತ್ತೆ ಮಾತನಾಡಿಕೊಂಡನು —

"ನಾನು ನಿಜವಾಗಿಯೂ ಮೂರ್ಖನು. ನನ್ನ ಮೂಢ ತನವು ಈಗೀಗ ಗೊತ್ತಾಗುತ್ತಾ ಬಂದಿತು. ನಾನು ನನ್ನ ಗೂಢ

ಶತ್ರುವಿಗೆ ಹೇಡಿಯಂತೆ ಅಂಜಿ ಕೊರಗುವುದಕ್ಕೆ ಪ್ರತಿಯಾಗಿ ನಾನು ಪತ್ತೇದಾರನಂತೆ ವರ್ತಿಸಿ ಆತನನ್ನು ಕಂಡುಹಿಡಿದು ಶಿಕ್ಷೆಗೆ ಗುರಿ ಮಾಡಿದ್ದರೆ, ನಿರಾತಂಕವಾಗಿ ಬಾಳಿಕೊಂಡಿರಬಹುದಾಗಿದ್ದಿತು ಈ ಪಶ್ಚಿಮ ಬುದ್ಧಿಯೇ ನನ್ನನ್ನು ಹಾಳು ಮಾಡಿಬಿಟ್ಟಿತು ಈಗ ಕಳೆದುಹೋದುದನ್ನು ಕಟ್ಟಿಕೊಂಡು ಪಶ್ಚಾತ್ತಾಪ ಪಡುವುದರಿಂದ ಆಗುವ ಲಾಭವಾದರೂ ಏನು? ಮುಂದೆಯಾದರೂ ವಿವೇಕದಿಂದ ವರ್ತಿಸಿದಲ್ಲಿ ಇಷ್ಟಾರ್ಥವು ಸಿದ್ಧಿಸುವುದರಲ್ಲಿ ಆವ ಸಂಶಯವೂ ಇರಲಾರದು ''

ಮಧುಮಾಧವನು ಈ ರೀತಿಯಾಗಿ ಮಾತನಾಡಿಕೊಂಡ ಬಳಿಕ ತನ್ನನ್ನು ತಾನು ನಿಂದಿಸುತ್ತಾ ಕಾಲವನ್ನು ಕಳೆಯಲಾರಂಭಿಸಿದನು

ಮಧುಮಾಧವನನ್ನು ಕಾರಾಗೃಹದಲ್ಲಿ ಬಿಟ್ಟು ಹೊರಟು ಹೋಗುವ ಸಂದರ್ಭದಲ್ಲಿ ಪರಂತಪನಿಗೂ ಮಧುಮಾಧವನಿಗೂ ಒಂದು ಸಣ್ಣ ಸಂಭಾಷಣೆಯು ನಡೆದಿದ್ದಿತು ಅದನ್ನು ಈ ಸಂದರ್ಭದಲ್ಲಿ ನಮ್ಮ ಪ್ರಿಯ ಪಾಠಕ ಮಹಾಶಯರ ತಿಳಿವಿಗಾಗಿ ಸೂಚಿಸುವೆವು.

ಪರಂತಪ ಮಧುಮಾಧವರ ಗೋಪ್ಯವಾದ ಸಂಭಾಷಣೆ

ಪರಂ—ಮಧು ! ನೀನೇನೋ ನಿರಪರಾಧಿಯೆಂದು ಹೇಳಿಕೊಳ್ಳುವೆ ; ಅದಂತಿರಲಿ. ನಿನಗೆ ಮತ್ತಾರ ಮೇಲಾದರೂ ಸಂಶಯವಿರುವುದಾದರೆ ತಿಳಿಸು.

ಮಧು—ನನಗೆ ಇದರ ವಿಚಾರವೇ ತಿಳಿಯದು

ಪರಂ—ನಿನಗೆ ಆರ ಮೇಲೂ ಸಂಶಯವಿಲ್ಲವೇ?

ಮಧು—ಇಲ್ಲ, ಮಹಾಶಯ !

ಪರಂ—ಚೆನ್ನಾಗಿ ಪರ್ಯಾಲೋಚಿಸಿ ಉತ್ತರಕೊಡು ; ಇದು ನಿನ್ನ ನಿರಪರಾಧಿತ್ವಕ್ಕೆ ಎಷ್ಟೋ ಸಹಾಯವಾಗುವುದು. ನಿನಗೆ ಸ್ವಲ್ಪ ಸಂದೇಹವಿದ್ದರೂ ಸಾಕು ; ನಾವು ಅದರ ಮೇಲೆ ಭೂತಾಕಾರದ ಕಟ್ಟಡವನ್ನೇ ಕಟ್ಟಿಬಿಡುವೆವು.

ಮಧು—ನಾನು ಆವ ಪ್ರಾಣಿಯ ಮೇಲೂ ಸಂಶಯಪಡಲಾರೆನು, ಆದರೆ—

ಪರಂ—ಮುಂದೆ ನಾಗಲಿ.

ಮಧು—ನನ್ನ ಗೂಢ ಶತ್ರುವು ಈ ಕೆಲಸವನ್ನು ಮಾಡಿದ್ದರೂ ಮಾಡಿರಬಹುದು.

ಪರಂ—ಆತನ ಆಕಾರ ಪ್ರಕಾರಗಳನ್ನಾದರೂ ತಿಳಿಸಬಲ್ಲೆಯಾ ?

ಮಧು—ಆಗಲಾರದು.

ಪರಂ—ಮಧು ! ನಿನ್ನ ಸ್ಥಾನದಲ್ಲಿ ನಾನು ಇದ್ದಿದ್ದರೆ, ನಿಮಿಷಮಾತ್ರದಲ್ಲಿ ಕಂಡು ಹಿಡಿದುಬಿಡುತ್ತಿದ್ದೆನು. ಈಗೆ ಮಾತನಾಡಿ ಪ್ರಯೋಜನವೇನು ? ಈಗಣ ಕಾಲದಲ್ಲಿ ನಿನ್ನಂತಹ ಕೃತಯುಗದ ಮನುಷ್ಯನು ಹುಟ್ಟುವುದೂ ಇಲ್ಲ ; ಹುಟ್ಟಿದರೆ ಹೆಸರ ಹೇಳುವುದೂ ಇಲ್ಲ

*  *  *  *

ಪರಂತಪನು ಮಧುಮಾಧವನನ್ನು ಬಿಟ್ಟು ಹೋಗುವ ಕಾಲ

ದಲ್ಲಿ ಈ ರೀತಿಯಾಗಿ ಸಂಭಾಷಣೆಯನ್ನು ನಡೆಯಿಸಿ ಹೊರಟು ಹೋದನು.

ಮಧುಮಾಧವನು ಈ ಸಂಭಾಷಣೆಯ ಸಾರಾಂಶವನ್ನು ಜ್ಞಾಪಿಸಿಕೊಂಡು, ತಾನು ಗೂಢಶತ್ರುವನ್ನು ಬಯಲುಮಾಡದೇ ಹೋದುದಕ್ಕಾಗಿ ಅಡಿಗಡಿಗೂ ಚಿಂತಿಸಿಕೊಂಡು ಸಂಕಟಪಟ್ಟನು. ಪಶ್ಚಿಮ ಬುದ್ಧಿಯುವರ ಲಕ್ಷಣವೇ ಹೀಗೆ

ಮಧುಮಾಧವನಿಗೆ ಕಾರಾಗಾರದಲ್ಲಿ ಮೊದಲನೆಯ ರಾತ್ರಿಯು ಕಳೆದು ಬೆಳಗಾಯಿತು. ಮರುದಿನದ ಪ್ರಾತಃಕಾಲ ದಲ್ಲಿ ಮಧುಮಾಧವನು ನ್ಯಾಯಸ್ಥಾನದಲ್ಲಿ ಧರ್ಮಾವತಾರನ ಇದಿರಿನಲ್ಲಿ ನಿಂತು ವಾಙ್ಮೂಲವನ್ನು ಕೊಡುವುದಕ್ಕಾಗಿ ಕರೆತರ ಲ್ಪಟ್ಟನು. ಅಷ್ಟರೊಳಗಾಗಿ ನ್ಯಾಯಸ್ಥಾನವು ಪ್ರೇಕ್ಷಕರಿಂದ ತುಂಬಿಹೋಗಿದ್ದಿತು. ಮಧುಮಾಧವನ ಮಿತ್ರಮಂಡಲಿಯೂ ಒಂದೆಡೆಯಲ್ಲಿ ನಿಂತು ನೋಡುತ್ತಿದ್ದಿತು. ಮಧುಮಾಧವನು ನ್ಯಾಯಸ್ಥಾನಕ್ಕೆ ಬಂದೊಡನೆ ಸುತ್ತಲೂ ನೋಡಿದನು. ಮಿತ್ರ ಮಂಡಲಿಯವರು ಕಾಣಿಸಿಕೊಂಡರೆ ಆವ ಅಪರಾಧವು ತಮ್ಮ ತಲೆಯ ಮೇಲೆ ಒರಗುವುದೋ ಎಂದು ಭಯಪಟ್ಟವನಾಗಿ ತಮ್ಮ ತಮ್ಮ ಮುಖಗಳನ್ನು ಬೇರೆಯ ಕಡೆಗೆ ತಿರಿಗಿಸಿಕೊಂಡು ಬಿಟ್ಟರು. ಇಂತಹವರನ್ನು ಆರಾದರೂ ಮಿತ್ರರೆಂದು ಕರೆಯಬಹುದೇ? ಇವರು ನಿಜವಾಗಿಯೂ ಮಿತ್ರರಲ್ಲ—ಹಿತ ಶತ್ರುಗಳು. ಲೋಕದಲ್ಲಿ ಅನೇಕರು ಇಂತಹ ಹಿತಶತ್ರುಗಳನ್ನು ಮಿತ್ರರನ್ನಾಗಿ ಮಾಡಿಕೊಂಡು ಸರ್ವನಾಶಕ್ಕೆ ಈಡಾಗಿ ಹೋಗಿರುವರು.

ಪ್ರಿಯಪಾಠಕ ಮಹಾಶಯ! ಲೋಕದಲ್ಲಿ ಹಿತಶತ್ರುಗಳೂ, ಗೋಮುಖ ವ್ಯಾಘ್ರಗಳೂ, ಸ್ವಾರ್ಥೈಕದೃಷ್ಟಿಯುಳ್ಳವರೂ, ಆತ

ಸ್ತುತಿ ಪರ ನಿಂದಾಪರಾಯಣರೂ, ಅಗಾಧ ಹೃದಯರೂ, ಮರ್ಮಿಗಳೂ, ದೀರ್ಘದ್ವೇಷಿಗಳೂ, ಕೋಪಾವೇಶ ಪರವಶರೂ, ಕುಲಚ್ಯುತರೂ, ದುರಭಿಮಾನಿಗಳೂ, ದಯಾರಸ ವಿಹೀನರೂ, ಚಿಂತಾಕುಲರೂ, ಮತ್ಸರಿಗಳೂ ಇವರೇ ಆದಿಯಾದ ಇನ್ನೂ ಇತರ ಪ್ರಾಣಿಗಳು ಮಿತ್ರಶಬ್ದಕ್ಕೆ ವಾಚ್ಯರಾಗಲಾರರು. ಇವರುಗಳು ಬಹು ಬೇಗನೆ ಮಿತ್ರರಂತೆ ನಟಿಸಿ ಅಂತರ್ಯಕ್ಕೆ ಸೇರಿ ಬಿಡುವರು. ಬಳಿಕ ಕಿತ್ತರೂ ಸರ್ವನಾಶವನ್ನುಂಟುಮಾಡದೆ ದೂರ ಸರಿಯರು. ಇಂತವರನ್ನು ಮಿತ್ರರನ್ನಾಗಿ ಮಾಡಿಕೊಂಡರೆ ಒಂದು ಬಗೆಯ ದುಃಖವುಂಟಾಗುವುದಾದರೆ, ಇವರನ್ನು ದೂರಮಾಡುವುದರಿಂದ ಪ್ರಾಣಾಪತ್ತಿನ ಮತ್ತೊಂದು ಬಗೆಯ ದುಃಖವು ಮಾನವನನ್ನು ಎಲ್ಲಿಯೂ ಇರಗೊಳಿಸದು. ಲೋಕ ತತ್ತ್ವವು ಹೀಗಿರುವುದರಿಂದ, ಚೆನ್ನಾಗಿ ಪರೀಕ್ಷಿಸಿ ಮಿತ್ರಸಂಪತ್ತನ್ನು ಗಳಿಸಿಕೊಳ್ಳುವಾತನೇ ಪರಮ ಭಾಗ್ಯಶಾಲಿಯು.

ಮಧುಮಾಧವನು ತನ್ನ ಮಿತ್ರರೆಂಬ ಹೆಸರಿನ ಹಿತಶತ್ರುಗಳನ್ನು ನೋಡಿ ಜಿಹಾಸೆಯಿಂದ ತಲೆಯನ್ನು ತಗ್ಗಿಸಿಕೊಂಡು ಕಟಾಂಜನದಲ್ಲಿ ನಿಂತಿರಲು, ಆತನ ಕೈಯಲ್ಲಿ ಒಂದು ಸಣ್ಣ ಚೀಟಿಯು ಇಡಲ್ಪಟ್ಟಿತು ಮಧುಮಾಧವನು ಅದನ್ನು ಓದಿ ನೋಡಿಕೊಂಡನು. ಅದರಲ್ಲಿ ಈ ರೀತಿಯಾಗಿ ಬರೆದಿದ್ದಿತು :—

" ಎದೆಗೆಡಬೇಡ, ಲೋಕದಲ್ಲಿ ಸತ್ಯವೇ ಜಯಿಸೀತು ಸತ್ಯಸಂಧನಿಗೆ ಎಲ್ಲಿಯೂ ಭಯವಿಲ್ಲ. ನಿನಗೆ ಎಲ್ಲವೂ ಸುಮುಖವಾಗಿಯೇ ಪರಿಣಮಿಸುವುದು " " ಸ "

ಮಧುಮಾಧವನು ಈ ರೀತಿಯಾಗಿ ಬರೆದಿದ್ದ ಪತ್ರವನ್ನು ನೋಡಿ, ಇದನ್ನು ಆರು ಬರೆದು ಕೊಟ್ಟವರೆಂದು ತಿಳಿಯುವುದಕ್ಕಾಗಿ

ಹಿಂದಿರುಗಿ ನೋಡಿದನು. ಅವಗುಂರಸವತಿಯಾದ ಯುವತಿಯೊಬ್ಬಳು ಆತನ ಹಿಂಗಡೆಯಲ್ಲಿಯೇ ನಿಂತಿದ್ದಳು. ಮಧುಮಾಧವನು, ಸರೋಜಸುಂದರಿಯೇ ತನಗೆ ಉಲ್ಲಾಸವನ್ನುಂಟುಮಾಡುವುದಕ್ಕಾಗಿ ಬೆಂಬಲವಾಗಿ ಬಂದು ನಿಂದಿರುವಳೆಂದು ತಿಳಿದು ಪರಮಾನಂದಭರಿತನಾದನು ಆರಿಗಾದರೂ ಸರಿಯೇ, ವಿಶ್ವಾಸವೆಂಬುದು ಹೇಳಿಕೊಟ್ಟರೆ ಬರತಕ್ಕುದಲ್ಲ

ಯಥಾಸಮಯದಲ್ಲಿ ಧರ್ಮಾವತಾರನು ತನ್ನ ಧರ್ಮಾಸನದಲ್ಲಿ ಕುಳಿತ ಕೂಡಲೆ, ಮಧುಮಾಧವನಿಗೆ ಅಪರಾಧವೆಂಥದೆಂಬುದನ್ನು ತಿಳಿಸಿ—ಮಧು! ಈ ವಿಷಯದಲ್ಲಿ ನಿನ್ನ ಹೇಳಿಕೆಯೇನು? ಎಂದು ಪ್ರಶ್ನೆಮಾಡಿದನು

ಮಧು—ನಾನು ನಿರಪರಾಧಿ

ಧರ್ಮಾವತಾರ—ನಿನ್ನ ಪಕ್ಷವನ್ನು ಹಿಡಿದು ವಾದಿಸುವವರಾರಿರುವರು ?

ಮಧು—ಧರ್ಮಾವತಾರ! ಆರೂ ಇಲ್ಲ

ಧರ್ಮಾ—ಸ್ವಪಕ್ಷವಾದಿಗಳನ್ನು ಏರ್ಪಡಿಸಿಕೊಳ್ಳುವುದಕ್ಕೆ ನಿನಗೆ ಅಭಿಪ್ರಾಯವಿರುವುದೇ ?

ಮಧು—ಸತ್ಯವು ಆವಾಗಲೂ ಸ್ವಪಕ್ಷವನ್ನು ತಾನೇ ವಾದಿಸುವುದು ಇದಕ್ಕೆ ಸತ್ಯವನ್ನು ಅಸತ್ಯವನ್ನಾಗಿಯೂ, ಅಸತ್ಯವನ್ನು ಸತ್ಯವನ್ನಾಗಿಯೂ ಮಾಡುವ ವಿಚಕ್ಷಣರಾದ ವಾಗ್ಮಿಗಳ ಸಾಹಾಯ್ಯವೇನೂ ಬೇಕಾಗಿರುವುದಿಲ್ಲ.

ಧರ್ಮಾ—ಇನ್ನು ಎರಡು ಮೂರು ದಿನಗಳೊಳಗಾಗಿ ಈ ವ್ಯವಹಾರವು ಪಂಚಾಯಿತರ ಇದಿರಿನಲ್ಲಿ ತೀರ್ಮಾನವಾಗು ವುದು. ಈಗ ತೆರಳ ಬಹುದು.

ಮಧುಮಾಧವನು ಈ ಮಾತನ್ನು ಕೇಳಿದ ಬಳಿಕ, ಮತ್ತೆ ಕಾರಾಗಾರಕ್ಕೆ ಕರೆತರಲ್ಪಟ್ಟನು. ಆತನು ಮಧ್ಯಾಹ್ನದ ಭೋಜನ ವನ್ನು ತೀರಿಸಿಕೊಂಡು ಒಂದೆಡೆಯಲ್ಲಿ ಕುಳಿತುಕೊಳ್ಳುತ್ತಿರುವಷ್ಟ ರಲ್ಲಿಯೇ ಒಬ್ಬ ನ್ಯಾಯವಾದಿಯು ಅಲ್ಲಿಗೆ ಬಂದು ತಾನು ಅಪ ರಾಧಿಯ ಪರವಾಗಿ ವಾದಿಸುವುದಾಗಿ ತಿಳಿಸಿದನು. ಮಧುಮಾಧ ವನು ತನಗೆ ಆವ ನ್ಯಾಯವಾದಿಯೂ ಬೇಕಿಲ್ಲವೆಂದು ಹೇಳಿ ಆತ ನನ್ನು ಕಳುಹಿಸಿ ಬಿಟ್ಟನು. ಬಳಿಕ ಯೋಗೆ ನಾರಾಯಣನು ವ್ಯಸನ ದಿಂದ ಕಂಗೆಟ್ಟವನಾಗಿ ಮಧುಮಾಧವನ ಬಳಿಗ ಬಂದು—ಮಧು ಬಹುಕಾಲ ನಂಬುಗೆಗೆ ತಕ್ಕವನಾಗಿದ್ದುಕೊಂಡು, ನೀನು ಇಂತಹ ಘೋರಕೃತ್ಯವನ್ನು ಮಾಡುವೆಯೆಂದು ನಾನು ಸ್ವಪ್ನದಲ್ಲಿಯು ನಂಬಿರಲಿಲ್ಲ, ಎಂದು ಸಂಕಟದಿಂದ ಮಾತನಾಡಿದನು

ಮಧು—ಪೂಜ್ಯ ಮಹಾಶಯ! ನಾನು ಈ ವಿಷಯ ದಲ್ಲಿ ಸಂಪೂರ್ಣವಾಗಿಯೂ ನಿರಪರಾಧಿ.

ಯೋಗೆ—ಅಪರಾಧವು ಸಪ್ರಮಾಣವಾಗಿ ನಿನ್ನ ತಲೆಯ ಮೇಲೆ ಹೊತ್ತಿರುವಲ್ಲಿ, ನೀನು ನಿರಪರಾಧಿಯೆಂದು ಸಮರ್ಥನ ಮಾಡುವುದು ನಿರರ್ಥಕವೇ ಸರಿ.

ಮಧು—ತಾವು ಈ ರೀತಿಯಾಗಿ ಮಾತನಾಡಬಾರದು ನಾನು ತಮ್ಮ ಸಿದ್ಧಾಂತದ ಮಾತನ್ನು ಕೇಳುವುದಕ್ಕೆ ಇನ್ನೂ ಸಿದ ನಾಗಿಲ್ಲ.

ಯೋಗೆ—ನನ್ನ ಸಿದ್ಧಾಂತವನ್ನಾದರೂ ಕೇಳು.

ಮಧು—ಅದರಿಂದ ಆವ ಪ್ರಯೋಜನವಿಲ್ಲವಾದರೂ ತಿಳಿಸೋಣವಾಗಲಿ

ಯೋಗೆ—ನನ್ನ ಪೆಟ್ಟಿಗೆಯಿಂದ ಕದ್ದ ಹಣವನ್ನು ನೀನು ಎಲ್ಲಿಯೋ ಹೂತಿಟ್ಟಿರುವುದಾಗಿ ಪತ್ತೇದಾರರು ನನಗೆ ತಿಳಿಯ ಹೇಳಿದರು

ಮಧು—ಅಹಾ! ಅವರು ಹಾಗ ಹೇಳಿದರೇ?

ಯೋಗೆ—ಅಹುದು

ಮಧು—ಅವರಿಗೆ ಇದು ಹೇಗೆ ಗೊತ್ತಾಯಿತು?

ಯೋಗೆ—ಅದು ಹೇಗಾದರೂ ಹೋಗಲಿ ಆ ಹಣವು ನನ್ನ ಕೈಬಿಟ್ಟು ಹೋಗುವುದಾದರೆ, ನಾನು ಮುಳುಗಿಯೇ ಹೋಗುವೆನು ನಾನು ಅದನ್ನು ಹೇಗಾದರೂ ಬರಮಾಡಿಕೊಳ್ಳಲೇ ಬೇಕು.

ಮಧು—ಹಾಗೆಯೇ?

ಯೋಗೆ—ಅಹುದು.

ಮಧು—(ಶಾಂತಭಾವದಿಂದ) ಹಾಗಾದರೆ ನಿಜವಾದ ಕಳ್ಳರನ್ನು ಪತ್ತೇ ಮಾಡುವುದಕ್ಕಾಗಿ ಕಾರ್ಯದಕ್ಷರಾದ ಪತ್ತೇದಾರರನ್ನು ನೇಮಿಸಿಕೊಳ್ಳಿರಿ. ನನಗಾದರೋ ತಮ್ಮ ಹಣದ ವಿಚಾರವೇ ಗೊತ್ತಿಲ್ಲ.

ಯೋಗೆ—ಮಧುಮಾಧವ! ಹಠಹಿಡಿಯಬೇಡ. ಹಠದಿಂದ ನೀನು ಮುಳುಗಿಯೇ ಹೋಗುವೆ. ನಾನು ನಿನ್ನನ್ನು ಉದ್ಧಾರ

ಮಾಡದೇ ಹೋಗುವುದಾದರೆ, ನಿನಗೆ ಈ ಜನ್ಮದಲ್ಲಿ ಉತ್ತಾರಣೆಯೆಂಬುದೇ ಇಲ್ಲ ಈ ಯವರಾಧದಿಂದ ನಿನಗೆ ಇಪ್ಪತ್ತು ವರ್ಷಗಳಿಗೇನೂ ಕಡಮೆಯಿಲ್ಲದೆ ಕಾರಾಗೃಹವಾಸದ ದಂಡನೆಯು ವಿಧಿಸಲ್ಪಡುವುದು—ಎಂದ ಮೇಲೆ, ಆ ಹೂತಿಟ್ಟ ಹಣದಿಂದ ನಿನಗಾಗುವ ಪ್ರಯೋಜನವೇನು? ನೀನು ನನ್ನ ಹಣವನ್ನು ಕೊಟ್ಟುಬಿಡುವುದಾದರೆ, ನಿನಗೆ ಬಿಡುಗಡೆಯಾಗುವಂತೆ ಏರ್ಪಾಡುಮಾಡಿ, ನೀನು ಮುಂದೆ ಯಾವಜ್ಜೀವವೂ ಸುಖವಾಗಿ ಬದುಕಿಕೊಳ್ಳುವುದಕ್ಕಾಗಿ ನಿನಗೆ ೧೦,೦೦೦ ರೂಪಾಯಿಗಳನ್ನೂ ಬಹುಮಾನವಾಗಿ ಕೊಡುವೆನು.

ಮಧು—ಇದೇ ಅಲ್ಲವೇ ನಿಮ್ಮ ಸಿದ್ಧಾಂತವು?

ಯೋಗೆ—ಅಹುದು, ಇದೇ ನನ್ನ ಸಿದ್ಧಾಂತವು.

ಮಧು—ಯೋಗೆ ಮಹಾಶಯ! ಅವರಾಧವು ನಿಷ್ಕಾರಣವಾಗಿ ನನ್ನ ತಲೆಯ ಮೇಲೆ ಹೊರಿಸಲ್ಪಟ್ಟಿರುವುದು; ಆದರೆ ನಾನು ಸರ್ವ ಪ್ರಕಾರದಿಂದಲೂ ನಿರವರಾಧಿಯು ಈಗ ನೀವು ನನ್ನಲ್ಲಿಗೆ ಬಂದು ನನ್ನನ್ನು ಅಧಃಪಾತಾಲಕ್ಕೆ ತುಳಿಯ ಬೇಕೆಂದು ಸಂಕಲ್ಪಮಾಡಿಕೊಂಡು ನನಗೆ ಸಲ್ಲದ ಆಸೆಯನ್ನು ತೋರುತ್ತಿರುವುದರಿಂದ ನಿಮ್ಮನ್ನು ಅವರಾಧಿಯೆಂದು ಏತಕ್ಕೆ ಕರೆಯಬಾರದು? ಈಗ ನೀವು ಹೇಗೆ ಅವರಾಧಿಗಳೋ ಹಾಗೆಯೇ ನಾನೂ ಅಪರಾಧಿಯು, ಆದರೆ ನಿಮಗೆ ಕಾರಾಗೃಹದ ನಿರ್ಬಂಧವಿಲ್ಲ, ನನಗಾದರೋ ಆ ನಿರ್ಬಂಧವುಂಟು. ಪೂಜ್ಯಮಹಾಶಯ! ಬಲು ಮಾತಿನಿಂದೇನು? ನಾನು ಪ್ರಮಾಣಮಾಡಿ ಹೇಳುವೆನು-ನಾನು ನಿಜವಾಗಿಯೂ ನಿರವರಾಧಿಯು. ನಾನು ನಿಮ್ಮ ಹಣದ ವಿಚಾರವನ್ನೇ ಅರಿಯೆನು.

ನಾನು ಹಣವನ್ನು ಕೊಡುವುದಾದರೆ, ನೀವು ಮುಕ್ತಿಲಾಭವನ್ನೂ ಪಾರಿತೋಷಿಕವನ್ನೂ ಕೊಡುವಿರಿ. ಬಳಿಕ ನಾನು ಈ ಆಸೆಯಿಂದ ಈ ಹಣವನ್ನು ತೆಗೆದುಕೊಂಡರೆ, ಕಾಣದ ಹಣವನ್ನು ಎಲ್ಲಿಂದ ತಂದುಕೊಡಲಿ? ಅಪರಾಧವು ಗುರುತರನಾದುದೆಂದು ತಾವೂ ಹೇಳೋಣವಾಗುತ್ತಿದೆ; ನನಗೂ ಹಾಗೆಯೇ ತೋರುತ್ತಿದೆ; ಆದರೆ ನನ್ನ ನಿರಪರಾಧಿತ್ವವು ಸ್ಥಾಪಿಸಲ್ಪಡುವುದೆಂದು ನನಗೆ ಸಂಪೂರ್ಣವಾದ ಭರವಸೆಯುಂಟು ಬಳಿಕ ನೀವುಗಳೆಲ್ಲರೂ ಅವಲಂಬಿಸಿರುವ ಮಾರ್ಗವು ತಪ್ಪಾದುದೆಂದು ನೀವೇ ಅರಿತು ಕೊಂಡು ನಾಚುಗೆಗೊಳ್ಳುವಿರಿ

ಯೋಗೆ—ಮಧು! ಮಾತಿನಿಂದ ನೀನು ನನ್ನನ್ನು ಮರುಳು ಮಾಡುತ್ತಿರುವೇ?

ಮಧು—ಮಾಡುತ್ತಿರುವೆನೇ?

ಯೋಗೆ—ಅಹುದು, ಮಾಡುತ್ತಿರುವೆ

ಮಧು—ಅದು ಹೇಗೆ?

ಯೋಗೆ—ನಿನ್ನ ಶಾಂತವಾದ ಅಪರಾಧ ತಿರಸ್ಕಾರದಿಂದ, ನನಗೆ ದಿಕ್ಕೇ ತೋರದಂತಾಗಿರುವುದು.

ಮಧು—ಯೋಗೆ ನಾರಾಯಣ ಮಹಾಶಯ! ನಾನು ನಿಮ್ಮಲ್ಲಿ ಕೆಲಸಕ್ಕೆ ಇದ್ದಾಗ, ನೀವು ನನ್ನನ್ನು ಪುತ್ರನಂತೆ ಕಾಪಿಟ್ಟುಕೊಂಡು ಬಂದಿರಿ. ನಾನೂ ನಿಮ್ಮ ನಂಬುಗೆಗೆ ಎಂದಿಗೂ ಅಪಾರ್ಥವನ್ನು ಕಲ್ಪನೆಮಾಡಿದವನಲ್ಲ. ಈಗ ತಾವು ನನ್ನನ್ನು ಬಿಡುಗಡೆಮಾಡುವುದಾಗಿ ತಿಳಿಸಿದುದರ ಮೇಲೆ, ನನ್ನ ಮನದಲ್ಲಿ

ಒಂದು ವಿಷಯವು ಹೊಳೆಯುತ್ತಿರುವುದು. ತಾವು ನನ್ನನ್ನು ಮೊದಲು ಬಿಡುಗಡೆ ಮಾಡೋಣವಾಗಲಿ; ಬಳಿಕ ನಾನು ಪತ್ತೇದಾರನಾಗಿ ನಿಜವಾದ ಅಪರಾಧಿಗಳನ್ನು ಹಿಡಿದು ಕೊಡುವೆನು. ತಾವು ನನ್ನನ್ನು ನಂಬುವುದಾದರೆ, ನಾನು ಸತ್ಯವಾಗಿಯೂ ಕೃತಕಾರ್ಯನಾಗುವೆನು.

ಯೋಗೆ—ನನ್ನ ನಂಬುಗೆಯೇ ಹೋಯಿತು

ಮಘು—ನನ್ನನ್ನು ಅಪರಾಧಿಯೆಂದು ಸಿದ್ಧಾಂತ ಮಾಡಿಕೊಂಡಿರುವಿರಾ, ಹೇಗೆ?

ಯೋಗೆ—ಅದರಲ್ಲಿ ಸಂದೇಹವೇ ಇಲ್ಲ ಇನ್ನಾದರೂ ಆತ್ಮರಕ್ಷಣೆಗೆ ದಾರಿಮಾಡಿಕೊಳ್ಳು.

ಮಧು—ತಾವು ನನ್ನನ್ನು ರಕ್ಷಿಸೋಣವಾಗಲಿ, ನಾನೂ ತಮ್ಮನ್ನು ರಕ್ಷಿಸುವೆನು

ಯೋಗೆ—ನಾನು ಮಾಡಬೇಕಾದುದೆಲ್ಲವೂ ಮಾಡಿಯಾಯಿತು ನಿನ್ನ ಅದೃಷ್ಟದಲ್ಲಿದ್ದಂತೆ ಎಲ್ಲವೂ ನಡೆದು ಹೋಗಲಿ ನನ್ನ ಹಣವಾದರೋ ಎಂದಾದರೊಂದು ದಿನ ಸಿಕ್ಕಿಯೇ ಸಿಕ್ಕುವುದು. ಕೆಟ್ಟು ಹಾಳಾಗಿ ಹೋದವನು ನೀನೇ ಹೊರತು ಮತ್ತಾರೂ ಅಲ್ಲ.

ಮಘು—ನಾನು ಕೆಟ್ಟರೆ ಅಷ್ಟರಲ್ಲಿಯೇ ಇರುವುದು. ತಾವು ತಮಗಾಗಿಯಾದರೂ ಹಣವನ್ನು ಬೇಗನೆ ಹುಡುಕಿಸೋಣವಾಗಲಿ ತಮ್ಮ ಹಣ ಸಿಕ್ಕಿದ ಕೂಡಲೆ ನನ್ನ ನಿರಪರಾಧಿತ್ವವೂ ಸ್ಥಾಪಿಸಲ್ಪಡುವುದು ಪೂಜ್ಯಮಹಾಶಯ! ಈ ಕೆಲಸವನ್ನಾದರೂ ತಾವು ಬೇಗನೆಯೇ ನೆರವೇರಿಸಿ ಕಳ್ಳರನ್ನು ಕಂಡು ಹಿಡಿದು ನಿಮ್ಮ

ಹಣವನ್ನು ಬರಮಾಡಿಕೊಳ್ಳಿರಿ, ಬಳಿಕ ನನ್ನಗತಿ ಹೇಗಾದರೂ ಆಗುವುದು.

ಈ ರೀತಿಯಾದ ಸಂಭಾಷಣೆಯು ನಡೆದ ಬಳಿಕ ಯೋಗಿ ನಾರಾಯಣನು ಮಧುಮಾಧವನನ್ನು ವಾಚಾಮಗೋಚರವಾಗಿ ನಿಂದಿಸಿ ತನ್ನ ಬೀಡಾರಕ್ಕೆ ಹಿಂದಿರುಗಿ ಹೊರಟು ಹೋದನು.

ಇದಾದ ಮೇಲೆ ಒಂದೆರಡು ಗಂಟೆಗಳು ಆವ ತೊಂದರೆಯೂ ಇಲ್ಲದೆ ಕಳೆದು ಹೋದುವು. ಬಳಿಕ ಒಬ್ಬ ಮುದುಕಿಯು ಮಧು ಮಾಧವನ ಬಳಿಗೆ ಕರೆತರಲ್ಪಟ್ಟಳು. ಆ ಮುದುಕಿಯು ಬಂದ ಕೂಡಲೆ ಮಧುಮಾಧವನ ಬಳಿಯಲ್ಲಿ ಒಂದಾಸನದ ಮೇಲೆ ಕುಳಿತು ಕೊಂಡು ಮಧುವನ್ನು ಬಲುಹೊತ್ತು ಎವೆಯಿಕ್ಕದೆ ನೋಡಿದ ಬಳಿಕ ಹೀ–ಹೀ–ಹೀ ಎಂದು ನಕ್ಕಳು. ಆ ನಗೆಯಲ್ಲಿ ಕೊಂಚವಾದರೂ ರಸವಿರಲಿಲ್ಲ. ಮುದುಕಿಯು ಇಂತಹ ನೀರಸವಾದ ನಗೆ ನಕ್ಕು ದನ್ನು ನೋಡಿ, ಮಧುಮಾಧವನು ರೇಗಿದವನಾಗಿ—ತಾಯೆ! ನೀನು ಇಲ್ಲಿಗೆ ಬರಲು ಕಾರಣವೇನು? ಎಂದು ಕೇಳಿದನು.

ಮುದುಕಿ–ಕಾರಣವಿಲ್ಲದೆಯೇ ಆರೂ ಆರಲ್ಲಿಗೂ ಬಾರರು.

ಮಧು—ನನ್ನೊಡನೆ ಮಾತನಾಡಲು ಬಂದಿರುವೆಯಾ?

ಮುದುಕಿ-—ಅಹುದು



ಮಧು—ಹಾಗಾದರೆ ನನ್ನನ್ನು ನೋಡಿ ನಗುತ್ತಾ ಕುಳಿತು ಕೊಳ್ಳುವುದಕ್ಕೆ ಇದು ಕಾಲವಲ್ಲ. ಹೇಳುವುದೇನಾದರೂ ಇದ್ದಲ್ಲಿ ಅದನ್ನು ಬೇಗನೆಯೇ ತಿಳಿಸಿ ಹೊರಡಬಹುದು.

ಮುದುಕಿ—ಬಂದಿರುವುದೇ ಮಾತನಾಡುವುದಕ್ಕಾಗಿ ಎಂದ ಮೇಲೆ, ಚಿಂತೆಯೇಕೆ?

ಮಧು—ನಿನ್ನ ಇಷ್ಟ ಬಂದಾಗ ತಿಳಿಸಮ್ಮಾ

ಮುದುಕಿ—ನಿನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಿತಲ್ಲವೇ? ನೀನೇ ಧೀರ!

ಮಧು—ನಿನ್ನ ಅಭಿಪ್ರಾಯ ಗೊತ್ತಾಗಲಿಲ್ಲ.

ಮುದುಕಿ—ನಾನು ಹೇಳಿದುದೇ ನನ್ನ ಅಭಿಪ್ರಾಯ

ಮಧು—ನನಗೆ ಅರ್ಥವಾಗಲಿಲ್ಲ.

ಮುದುಕಿ—ನೀನು ಹಣವನ್ನು ಕದ್ದೇ.

ಮಧು—ನಾನು ಕದಿಯಲಿಲ್ಲ.

ಮುದುಕಿ—ನೀನು ಅದನ್ನು ಕದ್ದು ಹೊತ್ತಿಟ್ಟಿರುವೆ ನೀನು ಮಾಡಿದುದು ಒಳ್ಳೆಯದೇ ಆಯಿತು ಆ ಹಣದಿಂದ ಏನ ಮಾಡಬೇಕೆಂದು ಸಂಕಲ್ಪಮಾಡಿರುವೆ?

ಮಧು—ನೀನು ಮುದುಕಿಯಾದುದರಿಂದ, ನಾನು ನಿನ್ನ ಮೇಲೆ ಕೋಪಮಾಡುವಂತಿಲ್ಲ; ಇಲ್ಲದಿದ್ದರೆ, 'ಮುದಿ ಗೂಬೆ! ಎದ್ದು ಹೊರಟೋಗು' ಎಂದು ಹೇಳಿಬಿಡುತ್ತಿದ್ದೆನು.

ಮುದುಕಿ—ನನ್ನಲ್ಲಿ ಹುಡುಗನ ಚಾಲಾಕು ತೋರಬೇಡ ನೀನು ಮನೆಗೆ ಬೆಂಕಿ ಹಾಕಿ ಹಣವನ್ನು ಕದಿಯಲಿಲ್ಲವೇ?

ಮಧು—ಸರಿ ಸರಿ; ನಿನ್ನ ಮಾತಿಗೆ ನಾನು ಉತ್ತರ ಕೊಡಬೇಕಾದುದೇನೂ ಇರುವುದಿಲ್ಲ

ಮುದುಕಿ—ಹಾಗೆಂದರೇನು? ನನ್ನ ಮಾತಿಗೆ ಉತ್ತರ ಕೊಟ್ಟೇ ತೀರಬೇಕು; ಕೊಡದಿದ್ದರೆ ಬಿಡುವರಾರು? ಇದನ್ನು ಸ್ವಪ್ನದ ಲೀಲಾ ವಿಲಾಸವೆಂದು ತಿಳಿದೆಯಾ?

ಮಧು—(ಜುಗುಪ್ಸೆಯಿಂದ) ನನ್ನನ್ನು ಅಪರಾಧಿಯೆಂದು ತಿಳಿದು ಮಾತನಾಡುವಿಯಾ, ಹೇಗೆ?

ಮುದುಕಿ—ಅಹುದು

ಮಧು—ಏತಕೆ?

ಮುದುಕಿ—ಸಕಾರಣವಾದ ಪ್ರಮಾಣಗಳಿಂದ ಅಪರಾಧವು ನಿನ್ನ ಮೇಲೆಯೇ ಹೊರುವುದು.

ಮಧು—ಹಾಗಾದರೆ ನಾನು ಅದನ್ನು ನಿಷೇಧಿಸಿದಲ್ಲಿ ಪ್ರಯೋಜನವಾಗುವುದೇನು?

ಮುದುಕಿ—ನಿಷೇಧಿಸುವುದರಿಂದ, ಅನೇಕ ಪ್ರಯೋಜನಗಳುಂಟು. ಈಗ ನಿಜವಾಗಿಯೂ ಹೇಳು—ನೀನು ಅಪರಾಧಿಯೇ?

ಮಧು—ನಾನು ಅಪರಾಧಿಯೆಂಬುದಕ್ಕೆ ಬೇಕಾದ ಹಾಗೆ ಕಾರಣಗಳಿರುವುವೆಂದು ನೀನೇ ಹೇಳಿದೆ?

ಮುದುಕಿ—ಅಹುದು, ಹೇಳಿದೆ.

ಮಧು—ಹಾಗಾದರೆ, ಅದಕ್ಕೆ ಪ್ರತಿಯಾಗಿ ವರ್ತಿಸುವುದು ಪ್ರಯೋಜನಕಾರಿಯಲ್ಲ. ನಾನು ನ್ಯಾಯಸ್ಥಾನದಲ್ಲಿಯೂ ನಿಷೇಧಿಸಿದೆನು ನಾನಾದರೋ ನಿರಪರಾಧಿಯೆಂದು ಹೇಳಿಹೇಳಿ ಬೇಸತ್ತು ಸತ್ತು ಹೋಗಿರುವೆನು.

ಮುದುಕಿ—ನನ್ನ ಮುಂದೆ ಸಿದ್ಧಾಂತವಾಗಿ ಹೇಳು.

ಮಧು—ನೀನಾರು ?

ಮುದುಕಿ—ನಾನು ಆರಾದರೇನು ? ನೀನು ನಿರಪರಾಧಿಯೆಂದು ನನಗೆ ತಿಳಿದು ಬಂದರೆ, ನನ್ನಿಂದಲೂ ನಿನಗೆ ತುಂಬಾ ಪ್ರಯೋಜನವಾಗಬಹುದು.

ಮಧು—ದಯಾಳುವಾದ ಮುದುಕಮ್ಮಾ ! ನಾನು ಸತ್ಯವಾಗಿಯೂ ನಿರಪರಾಧಿಯಮ್ಮಾ.

ಮುದುಕಿ—ನಿನಗೆ ಮತ್ತಾರ ಮೇಲಾದರೂ ಸಂಶಯವಿರುವುದೇನು ?

ಮಧು—ನಾನು ಗುರುತಿಸಬಹುದಾದ ಆರ ಮೇಲೂ ನನಗೆ ಸಂಶಯವಿಲ್ಲ

ಮುದುಕಿಯು ಮತ್ತೊಂದು ಸಲ ಹುಚ್ಚುಹುಚ್ಚಾಗಿ ನೀರಸವಾದ ನಗೆಯನ್ನು ನಕ್ಕು, ತನ್ನ ಧ್ವನಿಯನ್ನು ತಗ್ಗಿಸಿಕೊಂಡು—ಮಹಾಶಯ ! ನೀನು ನಿರಪರಾಧಿಯೆಂದು ನಾನು ಬಲ್ಲೆನು, ಎಂದು ನುಡಿದಳು.

ಮಧು—ನಾನು ನಿರಪರಾಧಿಯೆಂದು ನೀನೂ ಬಲ್ಲೆಯಾ?

ಮುದುಕಿ—ನಾನೂ ಬಲ್ಲೆನು.

ಮಧು—ನಿನಗೆ ಅಪರಾಧಿಯಾರೆಂಬುದು ಗೊತ್ತಿರಬೇಕು, ಹಾಗಾದರೆ ನನ್ನನ್ನು ಈ ವಿಪತ್ತಿನಿಂದ ಉದ್ಧಾರಮಾಡು

ಮುದುಕಿ—ಈಗ ನನಗೆ ಎಲ್ಲವೂ ಸಿತಾಸಿತವಾಗಿರುವುದು ; ಪರಿಣಾಮದಲ್ಲಿ ನಾನೇ ಗೆಲ್ಲಬಹುದೆಂದು ನನಗೆ ನಂಬುಗೆಯುಂಟು. ಹೇಗಾದರೂ ಆಗಲಿ, ನಾನು ನಿನ್ನನ್ನು ಉದ್ಧಾರ ಮಾಡುವೆನು

ಮಧು—(ಆದರದಿಂದ) ನನ್ನನ್ನು ಉದ್ಧಾರ ಮಾಡುವೆಯಾ ಮುದುಕಮ್ಮಾ ?

ಮುದುಕಿ—ತಪ್ಪದೆಯೇ ಮಾಡುವೆನು

ಮಧು—(ಕಂಬನಿಗರೆದು) ನನ್ನ ಸೌಭಾಗ್ಯದೇವತೇ ! ನೀನಾರಮ್ಮಾ ?

ಮುದುಕಿ—ನನ್ನನ್ನು ಕಾಣೆಯಾ ?

ಮಧು—ಕಂಡಂತೆ ಜ್ಞಾಪಕವಿಲ್ಲ.

ಮುದುಕಿ—ಗುರುತಿಸಲಾರೆಯಾ ?

ಮಧು—ಗುರುತಿಸಲಾರೆನು.

ಮುದುಕಿ—ಊಹಿಸುವುದಕ್ಕೂ ನಿನಗೆ ಬುದ್ಧಿಯಿಲ್ಲವೇ?

ಮುದುಕಿ—ಇಷ್ಟಾದರೂ ನಾವಿಬ್ಬರೂ ಪೂರ್ವಪರಿಚಿತರೆಂಬುದನ್ನಾದರೂ ಅರಿತುಕೊಳ್ಳು.

ಮಧು—ನಾವಿಬ್ಬರೂ ಪರಿಚಿತರೇ?

ಮುದುಕಿ—ಪರಿಚಿತರು

ಮಧು—ಎಲ್ಲಿ?

ಮುದುಕಿ—ಇಷ್ಟು ಮಾತನಾಡಿದ ಮೇಲೂ ನಿನಗ ನಾನಾರೆಂಬುದು ಗೊತ್ತಾಗದೇ ಹೋದಲ್ಲಿ, ಸ್ಥಲವನ್ನು ಹೇಳಿದರೆ ಗೊತ್ತಾಗುವುದೆಂದು ಏನು ನಂಬುಗೆ?

ಮಧುಮಾಧವನು ಗಂಭೀರಭಾವದಿಂದ ವಿಚಾರಪರನಾಗಿ ಆ ಮುದುಕಿಯನ್ನು ಮೇಲೂ ಕೆಳಗೂ ನೋಡಿ ತನ್ನ ಧ್ವನಿಯನ್ನು ಕುಗ್ಗಿಸಿಕೊಂಡು—ತಾಯಿ! ಸ್ಥಲ ಮಹಿಮೆಯಿಂದಾದರೂ ಪೂರ್ವ ಪರಿಚಯವು ಸ್ಫೂರ್ತಿಗೆ ಬರುವ ಸಂಭವವುಂಟು, ಎಂದು ನುಡಿದನು

ಮುದುಕಿ—ಇದ್ದರೂ ಇರಬಹುದು.

ಮಧು—ಹಾಗಾದರೆ ತಿಳಿಸಮ್ಮಯ್ಯಾ

ಮುದುಕಿ—ನಿನಗೆ ಆರಾದರೂ ಪೂರ್ವಪರಿಚಿತರೆಂಬುವರುಂಟೇ?

ಮಧು—ಉಂಟು

ಮುದುಕಿ—ಅವರಾರು?

ಮಧು—ಅವರ ಹೆಸರನ್ನು ಹೇಳಲು ಅಂಜುವೆನು

ಮುದುಕಿ—ಕಾರಣವೇನು ?

ಮಧು—ಅವರಿಗೆ ತೊಂದರೆ ಯಾಗಬಾರದೆಂದು.

ಮುದುಕಿ—ಹಾಗಾದರೆ, ಆ ಪರಿಚಿತರು ಹೆಂಗುಸಿರ ಎಹುದೆಂದು ಊಹಿಸಬೇಕಾಗುವುದು

ಮಧು—ಅಹುದು, ಆಕೆಯು ಹೆಂಗುಸು

ಮುದುಕಿ—ಆಕೆಯು ಹುಡುಗಿಯೋ—ಇಲ್ಲವೆ, ನನ್ನಂತೆ ಮುದುಕಿಯೋ ?

ಮಧು—ಆಕೆಯು ಇನ್ನೂ ಹುಡುಗಿ

ಮುದುಕಿ—ಹಾಗಾದರೆ ನನ್ನಂತೆ ಮುದುಕಿಯಲ್ಲ

ಮಧು—ಅಲ್ಲ, ತಾಯೇ !

ಮುದುಕಿ—ಹಾಗೆಯೋ ?

ಮಧು—ಹಾಗೆಯೇ

ಮುದುಕಿ—ಆಕೆಯ ಹೆಸರಾದರೂ ಏನು ?

ಮಧು—(ಹಿಂದುಮುಂದು ನೋಡಿ) ಆಕೆಯ ಹೆಸರು—ಸರೋಜಸುಂದರಿ.

ಮುದುಕಿ—(ನಕ್ಕು) ಈಗ ಆಕೆಯಾರೆಂಬುದು ಗೊತ್ತಾಯಿತು. ಆಕೆಯು ಆ ಅಡುಗೊಳಜ್ಜಿಯ ದಾಸಿಯಲ್ಲವೇ ?

ಮಧುಮಾಧವನು ಆಶ್ಚರ್ಯದಿಂದ ಬೆರಗಾದವನಾಗಿ ಕೊಂಚ ಹೊತ್ತಿನ ಮೇಲೆ ಸ್ಫೂರ್ತಿಗೊಂಡು—ತಾಯೀ! ನೀನು ಆಕೆಯೇ ಆಗದಿದ್ದರೆ, ನಿನಗೆ ಆಕೆಯ ವಿಚಾರವೇನೂ ಗೊತ್ತಾಗ ಲಿಕ್ಕೆ ಕಾರಣವಿರಲಾರದು, ಎಂದು ವಿನಯದಿಂದ ಮಾತನಾಡಿ ದನು.

ಮುದುಕಿ—ಏನು! ಈ ಮುದುಕಿಯು ಆ ಹುಡು ಗಿಯೇ?

ಮಧು—ಅಹುದು, ಈ ಮುದುಕಿಯ ವೇಷದ ಆ ಹುಡುಗಿ.

ಮುದುಕಿ—ಕೂಗ ಬೇಡ; ಬಾಯ ಮುಚ್ಚು.

ಮಧು—(ಆಶ್ಚರ್ಯದಿಂದ) ನನಗೇನೋ ಮೊದಲಿ ನಿಂದಲೂ ಸಂಶಯವೇ ತೋರಿಬರುತ್ತಿದ್ದಿತು. ಈಗ ಎಲ್ಲವೂ ಸ್ಪಷ್ಟವಾಯಿತು. ನೀನೇ ಆ ಸರೋಜಸುಂದರಿ. (ಚೆನ್ನಾಗಿ ನೋಡಿ) ಅಹುದಹುದು, ನೀನೇ ಆಕೆಯು; ಆಕೆಯೇ ನೀನು. ಇದರಲ್ಲಿ ಕೊಂಚವೂ ಸಂಶಯವಿಲ್ಲ.

ಮುದುಕಿ—ನಾನೇ ಆಕೆಯು. ಮೆಲ್ಲಗೆ ಮಾತನಾಡು. ನನ್ನ ಈ ವೇಷವು ಆರಿಗೂ ಗೊತ್ತಾಗಬಾರದು.

ಮಧು—ಈ ವೇಷದಿಂದ ನಾನು ಬೆರಗಾಗಿಯೇ ಹೋದೆ ನಲ್ಲಾ!

ಮುದುಕಿ—ಬೆರೆಗಾದೆಯಾ?

ಮಧು—ಅಹುದು, ಬೆರಗಾಗಿ ಬಿಟ್ಟೆನು

ಮುದುಕಿ—ಬೆರಗಾಗಲು ಕಾರಣವೇನು?

ಮಧು—ಚಿಕ್ಕ ಹುಡುಗಿಯು ದೊಡ್ಡ ಮುದು ಯಾಗುವುದಾದರೆ, ಆರು ತಾನೇ ಬೆರಗಾಗರು? ನೀನು ಸುಮ್ಮನೆಯೇ ಇರುತ್ತಿದ್ದರೆ, ನನಗೆ ಗೊತ್ತಾಗುತ್ತಲೇ ಇರಲಿಲ್ಲ.

ಮುದುಕಿ—ಅದೆಲ್ಲಾ ಹೋಗಲಿ. ನಾನೇ ಸರೋಜ ಸುಂದರಿ. ನಾನು ನಿನಗೆ ಸಾಹಾಯ್ಯವನ್ನೆಸಗಲು ಬಂದಿರುವೆನು. ನಾನು ನಿನಗೆ ಹೇಳಬೇಕಾದುದು ಬೇಕಾದಹಾಗಿರುವುದು. ನೀನು ಮೊಟ್ಟಮೊದಲು ಈ ಕಾರಾಗಾರದಿಂದ ಪಾರಾಗಬೇಕು.

ಮಧು—(ಬೆರಗಾಗಿ) ಪಾರಾಗಬೇಕೇ?

ಮುದುಕಿ—ಪಾರಾಗಲೇ ಬೇಕು

ಮಧು—ಅದು ಸಾಧ್ಯವೇ?

ಮುದುಕಿ—ಅದನ್ನು ಸಾಧ್ಯವನ್ನಾಗಿ ಮಾಡಬೇಕೆಂದೇ ನನ್ನ ಪ್ರಯತ್ನವು.

ಮಧು—ಇದರಿಂದ ನನ್ನ ಅಪರಾಧವು ಸ್ಥಿರಪಡುವುದಿಲ್ಲವೇ?

ಮುದುಕಿ—ನೀನು ನಿರಪರಾಧಿಯೆಂದು ಹೇಳಿದ ಮಾತ್ರಕ್ಕೆ, ನಿರಪರಾಧಿಯಾಗಲಾರೆ. ಅದು ನ್ಯಾಯಸ್ಥಾನದಲ್ಲಿ ಸಕಾರಣವಾಗಿ ರುಜುವಾತಾಗಬೇಕು. ನೀನು ಅಪರಾಧಿಯೆನ್ನುವುದಕ್ಕೆ ಬೇಕಾದ ಹಾಗೆ ಕಾರಣಗಳು ಒದಗಿಬಂದಿರುವುದರಿಂದ,

ಆ ವಿಚಾರದಲ್ಲಿ ಹೆಚ್ಚಾಗಿ ಶ್ರಮಪಡಬೇಕಾದುದೇನೂ ಇರುವುದಿಲ್ಲ. ನಿನ್ನ ನಿರಪರಾಧಿತ್ವವಾದರೋ ಪ್ರಮಾಣಗಳಿಂದ ಹೊರತಾಗಿ ಸಾಧಿಸಲಸಾಧ್ಯವು. ನಾವು ನಿನ್ನ ನಿರಪರಾಧಿತ್ವವನ್ನು ಸಾಧಿಸಿಕೊಡುವೆವು.

ಮಧು—ಅದು ಹೇಗೆ?

ಮುದುಕಿ—ನಿಜವಾದ ಅಪರಾಧಿಗಳನ್ನು ಕಂಡುಹಿಡಿದು ಕೊಟ್ಟರಾಯಿತು.

ಮಧು—ನನ್ನ ವಿಷಯದಲ್ಲಿ ನಿನಗೆ ಇಷ್ಟು ಅಭಿಮಾನವೇಕೆ?

ಮುದುಕಿ—ಕಾರಣವನ್ನು ಕೇಳುವೆಯಾ?

ಮಧು—ಹೇಳುವುದಾದರೆ ಕೇಳುವೆನು

ಮುದುಕಿ—ನಾನೂ ನಿನ್ನಂತೆಯೇ ಓಡಿ ಬಂದಿರುವೆನು ನನ್ನ ಮೇಲೂ ಅಪರಾಧವೇರ್ಪಟ್ಟಿರುವುದು. ನಾನು ಅಪರಾಧದ ದುಃಖವನ್ನೂ, ನಿರಪರಾಧಿಯಾಗಿರುವುದರ ಸುಖವನ್ನೂ ಕಂಡುಕೊಂಡಿರುವೆನು. ನಮ್ಮಿಬ್ಬರಿಗೂ ಗೂಢ ಶತ್ರುಗಳಿರುವುದರಿಂದ, ನಾವಿಬ್ಬರೂ ಸಮಾನರು. ಮೊದಲು ನಾನು ನಿನ್ನನ್ನು ರಕ್ಷಿಸುವೆನು; ಬಳಿಕ ನೀನು ನನ್ನನ್ನು ರಕ್ಷಿಸಬೇಕೆಂದು ನಾನು ಇಷ್ಟೆಲ್ಲಾ ಪ್ರಯತ್ನಮಾಡುತ್ತಿರುವುದು.

---

## ಆರನೆಯ ವಿಲಾಸ

### ಸ್ವಪ್ರಯತ್ನದ ಫಲ

ಮಧು—ಇದೆಲ್ಲವೂ ವಿಚಿತ್ರವಾದುದು

ಸರೋಜ—ಇದರಲ್ಲಿ ವಿಚಿತ್ರವೇನು ?

ಮಧು—ನೀನು ಇನ್ನೂ ಚಿಕ್ಕ ಹುಡುಗಿ ನಿನ್ನೆಯ ದಿನವೇ ನಮ್ಮಿಬ್ಬರಿಗೂ ಪರಿಚಯವುಂಟಾಗಿರುವುದು. ಈಗ ನೋಡಿದರೆ, ನೀನು ತುಂಬಾ ಲೋಕಾನುಭವದಿಂದ ಕೂಡಿದ ವಿವೇಕಶಾಲಿಯಾದ ಸಮರ್ಥನಂತೆ ಬುದ್ಧಿಮಂತಿಕೆಯಿಂದಲೂ ಯುಕ್ತಿಯಿಂದಲೂ ನನಗಾಗಿ ಕೆಲಸಮಾಡುತ್ತಿರುವೆ

ಸರೋಜ—ಇದರ ಕಾರಣವನ್ನು ನಾವಕಾಶವಾಗಿ ವಿಚಾರಮಾಡುತ್ತಾ ಕುಳಿತುಕೊಳ್ಳುವ ಈಗ ನಾನು ಹೇಳುವುದಕ್ಕೆ ಬಂದುದೇನೆಂದರೆ—ನಾನು ನಿನ್ನ ಗೂಢ ಶತ್ರುವನ್ನು ಪತ್ತೇಮಾಡುವುದಕ್ಕೆ ತೊಡಗಿರುವೆನು ; ಹಾಗೂ ನಿಜವಾದ ಕಳ್ಳರ ಬೆನ್ನಟ್ಟಿರುವೆನು ಇದರ ಕಾರಣವನ್ನು ನಿನಗೆ ತಿಳಿಸುವೆನು, ಕೇಳು. ಕಳ್ಳತನವು ನಡೆದ ರಾತ್ರಿಯಲ್ಲಿ, ನಮ್ಮ ಅಡುಗೂಳಜ್ಜಿಯ ಬೀಡಾರಕ್ಕೆ ಮೂರು ಮೈಲಿಗಳ ದೂರದಲ್ಲಿ ವಾಸಮಾಡಿಕೊಂಡಿರುತ್ತಿದ್ದ ಒಬ್ಬ ಬಡ ಹೆಂಗುಸಿನ ಬಳಿಗೆ ಹೋಗಿದ್ದೆನು ಅಲ್ಲಿ ನಾನು ನನ್ನ ಕೆಲಸವನ್ನು ತೀರಿಸಿಕೊಂಡು ಹಿಂದಿರುಗಿ ಮನೆಯ ಕಡೆಗೆ ತೆರಳಿದಾಗ ರಾತ್ರಿಯಲ್ಲಿ ಹನ್ನೊಂದು ಗಂಟೆಯ ಹೊತ್ತಾಗಿದ್ದಿತು. ಆ ಹೊತ್ತಿಗೆ ಸರಿಯಾಗಿ ಮನುಷ್ಯರ ಧ್ವನಿಗಳು ಅಸ್ಫುಟವಾಗಿ ಕೇಳಿಬಂದುವು. ನಾನು ಆವಾಗಳೂ ಧೈರ್ಯಶಾಲಿನಿಯಾಗಿ ಎಚ್ಚರಿಕೆಯಿಂದ ಮೈಮರೆಯದೇ ಇರತಕ್ಕವಳು. ಆದುದರಿಂದ ಇದರ

ಮರ್ಮವನ್ನು ಅರಿಯಬೇಕೆಂಬ ಕುತೂಹಲದಿಂದ ನಾನು ದಾರಿಯನ್ನು ಬಿಟ್ಟು ದಟ್ಟವಾಗಿ ಬೆಳೆದಿದ್ದ ಪೊದೆಗಳ ಹಿಂಗಡೆಯಲ್ಲಿ ಅವಿತುಕೊಂಡು ನಿಂತೆನು ಮೂರು ಜನರು ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು ಸಾಮಾನ್ಯವಾಗಿ ಅವರ ಮಾತುಗಳೆಲ್ಲವೂ ನನ್ನ ಕಿವಿಗೆ ಬಿದ್ದುವು ಹಾಲು ಚೆಲ್ಲಿದ ಹಾಗೆ ಪಸರಿಸಿದ್ದ ಬೆಳ್ದಿಂಗಳಲ್ಲಿ ಆ ಮೂವರ ಆಕಾರ ಪ್ರಕಾರಗಳನ್ನೂ ಚೆನ್ನಾಗಿ ಮನವಟ್ಟು ಮಾಡಿಕೊಂಡೆನು ಅವರನ್ನು ಆವಾಗ ಬೇಕಾದರೂ ನಾನು ಗುರುತಿಸಬಲ್ಲೆನು ಅವರು ತಮ್ಮ ಕೆಲಸವನ್ನು ತೀರಿಸಿಕೊಂಡು ಈ ಪೂರಕಡೆಗೆ ತೆರಳಿದರು ಇನ್ನು ಮುಂದೆ ನಾನು ಹೇಳುವ ವಿಷಯವು ಸ್ವಾರಸ್ಯವಾದುದು, ಅದನ್ನು ನೀನು ಆಲಿಸಿ ಕೇಳಬೇಕು

ಕಳ್ಳತನವಾದ ಮರುದಿನದ ಪ್ರಾತಃಕಾಲದಲ್ಲಿ ನಾನು ರಾತ್ರಿಯಲ್ಲಿ ಕಂಡ ಮೂವರೂ ನಮ್ಮ ಅಡುಗೂಳಜ್ಜಿಯ ಬೀಡಾರದಲ್ಲಿ ಬಂದು ತಂಗಿದರು ಒಬ್ಬ ಮನುಷ್ಯನು ಆಗಿಂದಾಗ ನಮ್ಮ ಬೀಡಾರದ ಸುತ್ತಲೂ ಸಂಚರಿಸಿಕೊಂಡು ಹೋಗುವನು ನಾನು ಆತನನ್ನು ನೋಡಿದಾಗಲೆಲ್ಲಾ, ಆತನು ಕಳ್ಳನಾಗಿರಬೇಕೆಂದು ತಿಳಿದುಕೊಂಡು ಸುಮ್ಮನೇ ಇದ್ದುಕೊಂಡಿದ್ದೆನು ಈಗ ನನಗೊಂದು ವಿಷಯವು ಸ್ಫೂರ್ತಿಗೆ ಬರುತ್ತಿರುವುದು ಆ ಮೂವರೂ ಸ್ನಾನ ಭೋಜನಾದಿಗಳನ್ನು ತೀರಿಸಿಕೊಂಡು ತಮ್ಮ ದಾರಿಹಿಡಿದು ತೆರಳಿದರು ಕೊಂಚ ಹೊತ್ತಿನ ಮೇಲೆ ಅವರು ಮತ್ತೆ ಬಂದು ಅಡುಗೂಳಜ್ಜಿಯನ್ನು ಕುರಿತು—ಮುದುಕಮ್ಮ ! ನಮ್ಮದೊಂದು ಕೈಚೀಲವು ಪತ್ತೆಯಿಲ್ಲ. ನೀನೇನಾದರೂ ಅದನ್ನು ಕಂಡು ತೆಗೆದಿಟ್ಟಿದ್ದರೆ ಹಿಂದಿರುಗಿ ಕೊಟ್ಟುಬಿಡು, ಎಂದು ಪ್ರಶ್ನೆಮಾಡಿದುದಕ್ಕೆ,

ಅಡುಗೂಳಜ್ಜಿಯು ಅದರ ವಿಚಾರವೇ ತನಗೆ ಗೊತ್ತಿಲ್ಲವೆಂದು ಹೇಳಿದಳು. ಬಳಿಕ ಆ ಮೂವರೂ ಅಡುಗೂಳಜ್ಜಿಯನ್ನು ಬಾಯಿಗೆ ಬಂದ ಹಾಗೆ ಬೈದು ಹೆದರಿಸಿ ಬೆದರಿಸಿ ಹೊರಟು ಹೋದರು ನಾನು ನಿನ್ನನ್ನು ಮೊದಲು ನೋಡುವ ವರೆಗೂ ಅದರ ವಿಚಾರವು ಅಷ್ಟಾಗಿ ತಲೆಗೆ ಹತ್ತಿರಲಿಲ್ಲ. ನೀನು ಬಂದ ಮೇಲೆ, ನಿನ್ನಿಂಡ ಅನೇಕ ನಂಗತಿಗಳನ್ನು ನಾನು ತಿಳಿದುಕೊಂಡು ಅದಕ್ಕೂ ಇದಕ್ಕೂ ಸಂಬಂಧವಿರಬಹುದೆಂದು ಒಂದು ತೆರನಾಗಿ ಆಲೋಚಿಸಿಕೊಂಡೆನು. ಆ ಕೈಚೀಲವೆಂಬುದೇ ಯೋಗನಾರಾಯಣನ ಹಣದ ಗಂಟಾಗಿರ ಬೇಕು ಆ ಕೈಚೀಲವನ್ನು ಕದ್ದವನಾರಂಬುದನ್ನು ನಾನು ನನ್ನ ಮನಸಲ್ಲಿಯೇ ಗುಣಕಾರ ಮಾಡಿಕೊಂಡಿರುವೆನು ಅಲ್ಲದೆಯೂ ನಾನು ಆ ಕಳ್ಳರ ಆಕಾರ ಪ್ರಕಾರಗಳನ್ನೂ ಚೆನ್ನಾಗಿ ಗುರುತಿಟ್ಟು ಕೊಂಡಿರುವೆನು ಅದು ಸಮಯದಲ್ಲಿ ತುಂಬಾ ಕೆಲಸಮಾಡ ಬಹುದು

ಮಧು—ಸರೋಜ! ಇದು ಅದ್ಭುತವಾದ ಸುದ್ದಿ

ಸರೋಜ—ಅದ್ಭುತವಾದ ಸುದ್ದಿಯೇ ಸರಿ

ಮಧು—ನಿನ್ನ ಉಪಕಾರಕ್ಕೆ ನಾನು ಆವ ಪ್ರತ್ಯುಪಕಾರ ವನ್ನೆಸಗಲಿ?

ಸರೋಜ—ಪ್ರತ್ಯುಪಕಾರದ ಕಾಲವು ಬರುವುದು

ಮಧುಮಾಧವನು ಈ ಮಾತನ್ನು ಕೇಳಿದ ಬಳಿಕ, ತನಗೂ ಪರಂತಪನಿಗೂ ನಡೆದ ಗುಪ್ತ ಸಂಭಾಷಣೆಯನ್ನು ತಿಳಿಸಲಾಗಿ, ಅದನ್ನು ಕೇಳಿದ ಸರೋಜಸುಂದರಿಯು —ಮಹಾಶಯ! ಇದನ್ನು

ಕೇಳಿ ನನಗೆ ತುಂಬಾ ಸಂತೋಷವಾಯಿತು. ಪರಂತಪನು ನಿನ್ನ ಸ್ವಭಾವವನ್ನು ಅರಿತುಕೊಂಡು ನೀನು ನಿರಪರಾಧಿಯೆಂದು ಭಾವಿಸುವುದು ಅಚ್ಚರಿಯ ಸುದ್ದಿಯೇನೂ ಅಲ್ಲ ನೀನು ನಿರಪರಾಧಿಯೆಂಬುದನ್ನು ನಾನೂ ಸಾಧಿಸುವೆನು, ಎಂದುಸುರಿದಳು.

ಮಧು—ಸರೋಜ! ನೀನು ಆತನನ್ನು ಕಂಡು ಈ ವಿಷಯವನ್ನು ಆತನಿಗೆ ತಿಳಿಯ ಹೇಳು; ಇದಕ್ಕಾಗಿ ನಾನೇಕೆ ತಪ್ಪಿಸಿಕೊಳ್ಳಬೇಕು?

ಸರೋಜ—ಹಾಗೆಂದರೇನು, ಮಹಾಶಯ? ನೀನು ತಪ್ಪಿಸಿಕೊಂಡು ಬಂದು ನನಗೆ ಒತ್ತಾಸೆಯಾಗಿ ನಿಲ್ಲದಿದ್ದರೆ, ಅಪರಾಧಿಗಳು ನನ್ನ ಕೈ ಹತ್ತುವ ಬಗೆ ಹೇಗೆ? ನಾನೊಬ್ಬಳೇ ನಿಂತು ನಿನಗಾಗಿ ಕೆಲಸಮಾಡುವುದಾದರೆ, ಜನರು ನನ್ನನ್ನು ಪರಿಪರಿಯಾಗಿ ಆಡಿಕೊಳ್ಳುವರು. ಇದರಿಂದ ನನ್ನ ಕೆಲಸವು ಕೈಗೂಡದೇ ಹೋಗಬಹುದು. ಜನರ ಸ್ವಭಾವವನ್ನು ಕುರಿತು ಹೀಗೆಯೇ ಸರಿಯೆಂದು ಸಿದ್ಧಾಂತ ಮಾಡಲಾಗುವುದಿಲ್ಲ. ಅವರು ಹೇಗೆ ತೋರುವುದೋ ಹಾಗೆಯೇ ಮಾತನಾಡುವರು; ಹೇಗೆ ಮಾತನಾಡುವರೋ ಹಾಗೆಯೇ ಕೆಲಸವನ್ನೂ ಮಾಡಿಬಿಡುವರು. ಕೆಲಸವು ಕೈಗೂಡಲಿ, ಕೈಗೂಡದಿರಲಿ—ಅದನ್ನು ಕಟ್ಟಿಕೊಂಡು ಅವರು ವ್ಯಸನಪಡುವುದಿಲ್ಲ. ಅದರ ಪರಿಣಾಮವನ್ನಾದರೋ ನಾವೇ ಅನುಭವಿಸಬೇಕಾಗುವುದು

ಮಧು—ನೀನು ಎಲ್ಲರಂತೆ ಸಾಮಾನ್ಯೆಯಾದ ಹೆಂಗುಸಲ್ಲ.

ಸರೋಜ—ಅದು ಸುಳ್ಳಲ್ಲ; ಮೇಲೆ ಮೇಲೆ ಒದಗಿ ಬಂದ ಕಷ್ಟಗಳು ನನ್ನನ್ನು ಧೈರ್ಯದಿಂದ ಮುಂದೆ ನುಗ್ಗುವಂತೆ ಮಾಡಿರುವುವು. ಇದರಿಂದ ನನ್ನನ್ನು ಗಂಡುಬೀರಿಯೆಂದು ತಿಳಿಯಬೇಡ. ನಾನು ಧೈರ್ಯವನ್ನು ಪಡೆದುಕೊಂಡಿರುವೆನೇ ಹೊರತು ಸ್ತ್ರೀತ್ವವನ್ನು ಕಳೆದುಕೊಂಡಿಲ್ಲ ಸ್ತ್ರೀಯಾದವಳು ಅಡುಗೆಯ ಮನೆಯಲ್ಲಿಯೇ ಹುಟ್ಟಿ ಸಾಯಬೇಕೆಂಬ ಸ್ತ್ರೀಧರ್ಮವನ್ನೇ ಉದ್ಘೋಷಿಸುವ ನಮ್ಮ ಭಾರತ ಮಹಿಳೆಯರು ನನ್ನನ್ನು ಸಹಸ್ರ ನಾಮಗಳಿಂದ ಅಲಂಕರಿಸಿ ಅಧಃಪಾತಾಲಕ್ಕೆ ನೂಕಿ ಬಿಡುವರು ಸ್ತ್ರೀಯಾದವಳು ಕಷ್ಟಕಾಲಗಳಲ್ಲಿ ಪುರುಷನಂತೆಯೇ ಆತ್ಮಸಂರಕ್ಷಣೆಯನ್ನು ಮಾಡಿಕೊಳ್ಳಬೇಕೆಂಬುದೂ ಸ್ತ್ರೀಧರ್ಮವಲ್ಲವೇ? ಮಾನಸಂರಕ್ಷಣೆಯೆಂಬುದು ಸ್ತ್ರೀಪುರುಷರಿಗೂ ಉಕ್ತವಾಗಿರುವ ಸಮಾನಧರ್ಮವು ಸ್ತ್ರೀಯಾದವಳು ತನ್ನ ಮಾನವನ್ನು ತಾನೇ ಸಂರಕ್ಷಿಸಿಕೊಳ್ಳುವವರೆಗೂ ದೇಶವು ಊರ್ಜಿತಸ್ಥಿತಿಗೆ ಬಾರದು. ಸ್ವಾರ್ಥಪರಾಯಣನಾದ ಪುರುಷನನ್ನು ನಂಬಿಕೊಂಡು ಸ್ತ್ರೀಯು ತನ್ನ ಮಾನರಕ್ಷಣೆಯ ಬಗೆಗೆ ಬಾಯಬಾಯ ಬಿಡುತ್ತಾ ಕುಳಿತರೆ, ಆಕೆಗೆ ಎಂದಿಗೂ ಉತ್ತಾರಣೆಯುಂಟಾಗಲಾರದು ಸ್ತ್ರೀಯಾದವಳು ಪುರುಷನಂತೆಯೇ ಸಂಸಾರಸಾಗರದಲ್ಲಿ ಈಸಬೇಕು; ಕಷ್ಟಬಂದಾಗ ಹಿಂದುಳಿದಿರದೇ ಧೈರ್ಯದಿಂದ ಹೋರಾಡಬೇಕು; ಸದಾಚರಣೆಗೆ ಚ್ಯುತಿಬಾರದಂತೆ ಆವಾಗಲೂ ಎಚ್ಚರಿಕೆಯಿಂದ ವರ್ತಿಸುತ್ತಿರಬೇಕು. ಇದೇ ಸ್ತ್ರೀಧರ್ಮದ ಸರ್ವಸಾರಸಂಗ್ರಹವು. ಮಹಾಶಯ! ಇದಂತಿರಲಿ ನೀನು ಈ ಕಾರಾಗಾರದಿಂದ ಪಾರಾಗುವುದಾದರೆ, ನಿನಗೆ ಅನೇಕ ಪ್ರಯೋಜನಗಳುಂಟು ಈಗ ನನಗೆ ತಿಳಿದಷ್ಟು ಸಂಗತಿಗಳು ಮೊದಲೇ ತಿಳಿದಿದ್ದರೆ, ನಿನಗೆ ಈ ದುರ

ವಸ್ಥೆಯೇ ಉಂಟಾಗುತ್ತಿರಲಿಲ್ಲ. ಈಗಲೂ ಕೈ ಮಿಂಚಿಲ್ಲ. ನಿನಗೆ ಪರಿಣಾಮದಲ್ಲಿ ಸುಖವೇ ಉಂಟಾದೀತು.

ಮಧು—ನನ್ನ ಗೂಢ ಶತ್ರುವಾರೆಂಬುದನ್ನು ನೀನು ಅರಿತಿರುವುದಾಗಿ ಹೇಳಿದೆಯಲ್ಲವೇ?

ಸರೋಜ—ಹೇಳಿದೆನು.

ಮಧು—ಅದು ಹೇಗೆ ಸಾಧ್ಯ?

ಸರೋಜ—ಆ ಯೋಗವು ನನಗ ಹಠಾತ್ತಾಗಿ ಲಭಿಸಿತು ನನಗೆ ತುಂಬಾ ಲೋಕಾನುಭವವಿರುವುದರಿಂದ, ನಾನು ಸೂಕ್ಷ್ಮ ದೃಷ್ಟಿಯುಳ್ಳವಳಾದರೂ ದೂರದೃಷ್ಟಿಯುಳ್ಳವಳು

ಮಧು—ಹಾಗಾದರೆ ನೀನಾರು? ವಿಶದವನಾಗಿ ತಿಳಿಸು.

ಸರೋಜ—ನೀನು ಈ ಮನೆಯಿಂದ ತಪ್ಪಿಸಿಕೊಂಡು ಹೊರಗೆ ಬಂದ ಮೇಲೆ, ನನ್ನ ವೃತ್ತಾಂತವನ್ನು ತಿಳಿಸುವೆನು.

ಮಧು—ನಾನು ಹೊರಗೆ ಬಂದಕೂಡಲೆಯೇ ಎಲ್ಲವನ್ನೂ ತಿಳಿಸಬೇಕು.

ಸರೋಜ—ಆಗಲಿ.

ಮಧು—ನಾನು ಆವಾಗ ತಪ್ಪಿಸಿಕೊಳ್ಳಬೇಕು?

ಸರೋಜ—ಈ ರಾತ್ರಿಯಲ್ಲಿಯೇ

ಮಧು—ಹೇಗೆ?

ಸರೋಜ—(ಕರವಸ್ತ್ರವನ್ನು ತೋರಿ) ಇದನ್ನು ಹತ್ತಿರ ದಲ್ಲಿಟ್ಟುಕೊಂಡಿರು. ಕಾರಾಧಿಕಾರಿಗಳನ್ನು ಕಂಡಕೂಡಲೆ ಅವರ ಮೂಗಿನ ಹತ್ತಿರ ಅಲ್ಲಾಡಿಸು ಬಳಿಕ ನಿನ್ನ ಮಾರ್ಗವು ಸುಗಮ ವಾಗುವುದು ದೊಡ್ಡದೊಡ್ಡ ಪಟ್ಟಣಗಳ ಕಾರಾಮಂದಿರಗಳಲ್ಲಿ ನಿರ್ಬಂಧಗಳು ಹೆಚ್ಚಾಗಿಯೇ ಇರುವುವು ; ಇಂತಹ ಹಳ್ಳಿಗಾಡಿನ ಕಾರಾಗೃಹದಲ್ಲಿ ಮೂರೂ ಮತ್ತೊಂದು ಜನರಿರುವುದಿಲ್ಲ ಅದು ಕಾರಣ ಇಲ್ಲಿಂದ ತಪ್ಪಿಸಿಕೊಂಡು ಹೋಗುವುದು ನಿನಗೆ ಅಸಾಧ್ಯ ವೇನೂ ಆಗುವುದಿಲ್ಲ ಕೆಲಸದಲ್ಲಿ ಮಟ್ಟಿಗೆ ನೀನು ಬಲು ಜಾಗ ರೂಕನಾಗಿರಬೇಕು. ನಾನೂ ಹಿಂದೊಂದು ಸಲ ಕಾರಾಗಾರದಲ್ಲಿ ಸಿಕ್ಕಿ ಬಿದ್ದು ಬಲು ಬುದ್ಧಿಮಂತಿಕೆಯಿಂದ ತಪ್ಪಿಸಿಕೊಂಡೆನು ಈ ವಿಚಾರವೆಲ್ಲವನ್ನೂ ನಾನು ನಿನಗೆ ಸಾವಕಾಶವಾಗಿ ತಿಳಿಯಪಡಿಸು ವೆನು ಈಗ ನಾವು ಕಾಲೋಚಿತವಾದುದನ್ನು ನೆರವೇರಿಸಲೇ ಬೇಕಾಗಿರುವುದು

ಮಧುಮಾಧವನು ಸರೋಜಸುಂದರಿಯಿಂದ ಕರವಸ್ತ್ರ ವನ್ನು ಸಂಗ್ರಹಿಸಿಟ್ಟುಕೊಂಡನು ಬಳಿಕ ಸರೋಜಸುಂದರಿಯು ಕಾರಾಗಾರದಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಮಾಡಬೇಕಾದ ಉಪಾಯಗಳೆಲ್ಲವನ್ನೂ ಒಂದೊಂದಾಗಿ ತಿಳಿಯ ಹೇಳಿದಳು ; ಅಲ್ಲ ದೆಯೂ ತಾನೂ ಹೊರಗಡೆಯಲ್ಲಿ ಕಾದುಕೊಂಡಿರುವುದಾಗಿ ತಿಳಿಸಿ ದಳು. ಮಧುಮಾಧವನು ಬಳಿಕ ಸರೋಜಸುಂದರಿಯನ್ನು ಕುರಿತು—ಸರೋಜ! ಇಷ್ಟಾದರೂ ನೀನು ನನ್ನ ಗೂಢ ಶತ್ರುವಿನ ವಿಷಯವಾಗಿ ಏನನ್ನೂ ತಿಳಿಸಲಿಲ್ಲವಲ್ಲಾ! ಎಂದು ಮತ್ತೆ ಕೇಳಿ ದನು.

ಸರೋಜ—ನೀನು ಇಲ್ಲಿಂದ ಪಾರಾಗಿ ಹೊರಗೆ ಬಂದ ಮೇಲೆ ತಿಳಿಸುವೆನು. ಅಲ್ಲಿಯ ವರೆಗೂ ಜೀವವನ್ನು ಬಿಗಿಯಾಗಿ ಹಿಡಿದುಕೊಳ್ಳು. ಈಗ ನೀನು ಬೇರೆಯ ವೇಷವನ್ನು ತಾಳಬೇಕು.

ಸರೋಜಸುಂದರಿಯು ಹೀಗೆ ಹೇಳಿದ ಕೂಡಲೆಯೇ, ತನ್ನ ಧ್ವನಿಯನ್ನು ಗರಸಾಗಿ ಮಾಡಿಕೊಂಡು ಮಧುಮಾಧವನನ್ನು ಕುರಿತು—ಎಲಾ ಹರವಾದಿ! ನಿನಗೆ ಎಷ್ಟು ಹೇಳಿದರೂ ತಲೆಗೆ ಹತ್ತುವುದೇ ಇಲ್ಲ. ನಿನ್ನ ಪ್ರಾಚೀನಕರ್ಮಕ್ಕೆ ನಾನೇನ ಮಾಡಲಿ? ನಿನ್ನ ಹಣೆಯ ಬರೆಹವನ್ನು ತಪ್ಪಿಸಬಲ್ಲವರಾರು? ತಪ್ಪಿಗೆ ಒಪ್ಪಿಕೊಳ್ಳೆಂದು ನಾನು ಗಿಳಿಗೆ ಹೇಳಿದ ಹಾಗೆ ಹೇಳಿದರೂ, ನಿನ್ನ ಮನಸ್ಸಿಗೆ ಹತ್ತುವಂತಿಲ್ಲ ಇನ್ನು ನಿನ್ನ ಪಾಡು; ನಾವು ನಿನ್ನ ಮುಂದೆ ಇನ್ನೆಷ್ಟು ತಲೆಯನ್ನು ಚೆಚ್ಚಿಕೊಳ್ಳುವುದಕ್ಕಾದೀತು? ನಿನಗೆ ಶನಿಯು ಕಾಡುತ್ತಿರುವಲ್ಲಿ, ನಮ್ಮ ಮಾತು ಹಿತವಾಗುವುದೆಂದರೇನು? ನೀನು ಸತ್ತರೆ ಸಾಯಿ, ಬದುಕಿದರೆ ಬದುಕು ನಿನ್ನ ಆಸೆಯು ಇಂದಿಗೆ ತೀರಿತು, ಎಂದು ಭಯವುಂಟಾಗುವಂತೆ ಮಾತನಾಡಿದಳು

ಮಧುಮಾಧವನು ಸರೋಜಸುಂದರಿಯ ಈ ಭಯೋತ್ಪಾದಕವಾದ ಮಾತನ್ನು ಕೇಳಿ ದಿಕ್ಕು ತೋರದವನಾಗಿ ಭೂವ್ಯಾಕಾಶಗಳನ್ನು ನೋಡುತ್ತಾ ಕುಳಿತಿರಲು, ಕಾರಾಧಿಕಾರಿಯು ಬಂದು—ಮುದುಕಮ್ಮ! ಈತನಿಗೆ ಎಷ್ಟು ಹೇಳಿದರೂ ಪ್ರಯೋಜನವಿಲ್ಲ; ನೀನು ವ್ಯರ್ಥವಾಗಿ ಈತನಿಗಾಗಿ ಕಂಠವನ್ನು ಒಣಗಿಸಿಕೊಳ್ಳುವೆಯೇಕೆ? ಇನ್ನು ಹೊತ್ತಾಯಿತು, ನೀನು ತೆರಳಬಹುದು, ಎಂದನು.

ಮುದುಕಿ—ಮಹಾಶಯ! ನಾನೂ ಹೊರಡುವುದರಲ್ಲಿಯೇ ಇದ್ದೆನು. ನಾನು ಇಲ್ಲಿಗೆ ಬಂದುದು ಮೊದಲನೆಯ ತಪ್ಪು;

ಈ ಅವಿವೇಕಿಯೊಡನೆ ಇಷ್ಟು ಹೊತ್ತಿನ ವರೆಗೂ ಕಂಠಶೋಷಣೆಯನ್ನು ಮಾಡಿಕೊಂಡುದು ಎರಡನೆಯ ತಪ್ಪು. ಇದು ಬದುಕತಕ್ಕ ಕೂಸಲ್ಲ ಈತನು ಅಪರಾಧಿಯೆಂದೇ ಏರ್ಪಟ್ಟು ಹೋಯಿತು. ಇನ್ನು ಅವನ ಅಪ್ಪನಾಣೆ. ಇಂಥವರನ್ನು ಮೊದಲು ಶೂಲಕ್ಕೆ ಏರಿಸಿಬಿಡಬೇಕು—ಇಲ್ಲವೇ, ಸಾಯುವ ವರೆಗೂ ಇಂಥವರನ್ನು ಬಂಧನದಲ್ಲಿಯೇ ಕೊಳೆ ಹಾಕಬೇಕು ಹೀಗೆ ಮಾಡುವುದರಿಂದ ನಮ್ಮ ದೇಶಕ್ಕೂ ಜನಾಂಗಕ್ಕೂ ಕ್ಷೇಮವೇ ಉಂಟಾಗುವುದು.

ಕಾರಾಧಿಕಾರಿ—ಈ ಮುಟ್ಠಾಳನಿಗೆ ಸರಿಯಾದ ಸ್ಥಾನವೇ ದೊರೆತಿರುವುದು ಇದೇ ಇವನ ತೌರುಮನೆ ಈತನು ಇಲ್ಲಿಯೇ ಬಿದ್ದಿರಲಿ; ಈತನ ಗೊಡವೆ ನಮಗೇಕೆ? ಹೊರಡಮ್ಮಾ, ಹೊರಡು ಇನ್ನು ನೀನು ಇಲ್ಲಿರುವುದು ತರವಲ್ಲ; ಈ ಚಂಡಾಲನು ಇನ್ನು ಮುಂದೆ ಮತ್ತಾವ ಅನರ್ಥವನ್ನುಂಟುಮಾಡುವನೋ ಬಲ್ಲವರಾರು?

ಕಾರಾಧಿಕಾರಿಯು ಈ ರೀತಿಯಾಗಿ ಹೇಳಿ ಮುದುಕಿಯನ್ನು ಹೊರಗೆ ಬರಮಾಡಿಕೊಂಡು ಆ ಕೋಣೆಗೆ ಬೀಗಮುದ್ರೆಮಾಡಿ ಹೊರಟುಹೋದನು

ಮುದುಕಿಯ ವೇಷದ ಸರೋಜಸುಂದರಿಯು ಮಧುಮಾಧವನಿಗೆ ಹೇಳಬೇಕಾದುದೆಲ್ಲವನ್ನೂ ಹೇಳಿ, ಕಾರಾಧಿಕಾರಿಯು ಬರುತ್ತಿರುವುದನ್ನು ಹೇಗೋ ಅರಿತುಕೊಂಡು, ಮಧುಮಾಧವನನ್ನು ವಾಚಾಮಗೋಚರವಾಗಿ ನಿಂದಿಸುತ್ತಿದ್ದಂತೆ ನಟನೆಮಾಡಿ, ಒಂದು ಕ್ಷಣವೂ ಅಲ್ಲಿ ನಿಲ್ಲದೆಯೇ ಕಾರಾಗೃಹದಿಂದ ಹೊರಗೆ ಬಂದುಬಿಟ್ಟಳು. ಬಳಿಕ ಮಧುಮಾಧವನು ಮತ್ತಾರ ಗಲಭೆಯೂ ಇಲ್ಲದೆ ತನ್ನಿಚ್ಛೆಬಂದಂತೆ ಪರ್ಯಾಲೋಚಿಸುವುದಕ್ಕೆ ವ್ಯವಧಾನವು

ದೊರೆತುದಕ್ಕಾಗಿ ಸಂತಸಗೊಂಡು ತನ್ನೊಳಗೆ ತಾನೇ ಮಾತನಾಡಿಕೊಂಡನು :—

" ಇಂದಿನ ಬೆಳಗಿನಿಂದ ಸಾಯಂಕಾಲದೊಳಗಾಗಿ ಎಷ್ಟು ಕಾರಣ ಕಥೆಗಳು ನಡೆದುಹೋದುವು. ಆಪದ್ಬಾಂಧವಳಾದ ಸರೋಜಸುಂದರಿಯು ಕಷ್ಟಕಾಲಕ್ಕೆ ಸರಿಯಾಗಿ ಒದಗಿಬಂದುದು ನನ್ನ ಭಾಗ್ಯೋದಯವೇ ಸರಿ

ಸುಂದರಿಯಾದ ಯುವತಿಯೆಂದು ಸರೋಜಸುಂದರಿಯಲ್ಲಿ ನನ್ನ ಮನವು ಮೊದಲಲ್ಲಿ ಎಡೆಗೊಂಡಿತು ಬಳಿಕ ಆಕೆಯು ಅಡುಗೂಳಜ್ಜಿಯ ಬಳಿಯಲ್ಲಿ ಎಂಜಲ ತಟ್ಟೆಗಳನ್ನು ತೊಳೆಯುವ ದಾಸಿಯ ವೃತ್ತಿಯಲ್ಲಿದ್ದುದನ್ನು ನೋಡಿ ನನ್ನ ಮನವು ಆಕೆಯಲ್ಲಿ ಮರುಕಗೊಂಡಿತು ತರುವಾಯ ಆಕೆಯು ನನ್ನಲ್ಲಿ ಅವ್ಯಾಜ ಬಂಧುತ್ವವನ್ನು ತೋರಿದುದರಿಂದ, ನನ್ನ ಮನವು ಆಕೆಯಲ್ಲಿ ಕೃತಜ್ಞತೆಯಿಂದ ವರ್ತಿಸಲಾರಂಭಿಸಿತು. ಅನಂತರದಲ್ಲಿ ಆಕೆಯು ನನ್ನ ವಿಷಯುದಲ್ಲಿ ಒತ್ತಾಸೆಯಾಗಿ ಬಂದು ನಿಂತು ತೋರಿದ ಸಾಹಸವನ್ನೂ, ಹೇಳಿದ ಬುದ್ಧಿವಾದವನ್ನೂ, ಮಾಡಿದ ಚಮತ್ಕಾರಕವಾದ ಕಾರ್ಯಕಲಾಪಗಳನ್ನೂ ಜ್ಞಾಪಿಸಿಕೊಂಡೊಡನೆಯೇ ನನ್ನ ಮನವು ಆಕೆಯಲ್ಲಿ ಭಯಭಕ್ತಿಗಳನ್ನು ತೋರಲಾರಂಭಿಸಿತು. ಈಕೆಯು ಎಂದಿಗೂ ಭೂಲೋಕದ ಸ್ತ್ರೀಯಲ್ಲ; ನನ್ನನ್ನು ಉದ್ಧಾರ ಮಾಡುವುದಕ್ಕಾಗಿ ದೇವಲೋಕದ ದೇವತೆಯೇ ಭೂಲೋಕಕ್ಕೆ ಇಳಿದು ಬಂದಿರಬೇಕು. ಈ ರೀತಿಯಾದ ವರ್ತನವು ಮಾನವ ಜಾತಿಗೆ ಸಹಜವಾದ ಧರ್ಮವಲ್ಲ. ಕಾರಾಧಿಕಾರಿಯು ಬರುವನೆಂಬ ಸುಳಿವನ್ನು ಅರಿತಕೂಡಲೆಯೇ ಆಕೆಯು ತೋರಿದ ನಾಟಕಾಭಿನಯುವನ್ನು ಜ್ಞಾಪಕಕ್ಕೆ ತಂದುಕೊಂಡರೆ, ಆಕೆಯ ಲೋಕಾನು

ಭವವು ಎಷ್ಟರ ಮಟ್ಟಿಗೆ ಅದ್ವಿತೀಯವಾದುದೆಂದು ಆಶ್ಚರ್ಯ ಪಡಬೇಕಾಗಿರುವುದು. ಹೆಂಗುಸಿನಲ್ಲಿ ಧೈರ್ಯವಿರುವುದೆಂಬು ದನ್ನು ನಾನು ಈಕೆಯಲ್ಲಿಯೇ ನೋಡುತ್ತಿರುವುದು. ಏನಾದರೂ ಆಗಲಿ, ಭಗವಂತನು ನನಗೆ ಕಷ್ಟಗಳನ್ನು ಕೊಟ್ಟು, ಅವುಗಳ ನಿವಾರಣೆಯ ಬಗೆಗೆ ಈಕೆಯನ್ನು ತೋರಿರುವುದಕ್ಕಾಗಿ "ಭಯ ಕೃದ್ಭಯನಾಶನಃ" ಎಂಬ ಬಿರುದು ಆತನಿಗೇ ಸಲ್ಲತಕ್ಕುದಾಗಿರು ವುದು ಸಚ್ಚಿದಾನಂದ ಸ್ವರೂಪನಾದ ಭಗವಂತನು ಆವಾಗಳೂ ಜಯಶೀಲನಾಗಿರಲಿ"

ಮಧುಮಾಧವನು ಈ ರೀತಿಯಾಗಿ ಆಲೋಚಿಸುತ್ತಾ ಕುಳಿತುಕೊಂಡಿರುವಾಗಳೇ ಹಗಲು ಕಳೆದು ರಾತ್ರಿಯಾಗುತ್ತಾ ಬಂದಿತು.

ಮಧುಮಾಧವನು ಮತ್ತೆ ಚಿಂತಿಸಿದನು :—

"ಇದೇನು? ಆಶ್ಚರ್ಯದ ಮೇಲೆ ಆಶ್ಚರ್ಯ! ಎಲ್ಲೆಲ್ಲಿ ನೋಡಿದರೂ ಸರೋಜಸುಂದರಿಯ ರೂಪವೇ ಕಾಣಿಸಿಕೊಳ್ಳುತ್ತಿರು ವುದು. ಆಕೆಯ ಒಂದೊಂದು ರೂಪವೂ ಮುಂದಣ ಕೆಲಸಕ್ಕೆ ಸಿದ್ಧನಾಗುವಂತೆ ನನ್ನನ್ನು ಪ್ರೇರಿಸುತ್ತಿರುವುದು. ಇದೇನು-ಸ್ವಪ್ನವೇ-ಇಲ್ಲವೆ, ಜಾಗರವೇ? ಇಲ್ಲ, ನಾನಿನ್ನೂ ಎಚ್ಚರವಾಗಿಯೇ ಇರುವೆನು.

ಸರೋಜಸುಂದರಿ! ನೀನಾಡುತ್ತಿರುವ ಮಾತು ನನಗೆ ಗೊತ್ತಾಯಿತು ಇದು ನಾಡಿನ ಕಾರಾಗಾರವೆಂದೂ, ಇಲ್ಲಿರತಕ್ಕ ಬಂದಿಗಳಿಗೆ ಹೆಚ್ಚಿನ ನಿರ್ಬಂಧವೇನೂ ಇರುವುದಿಲ್ಲವೆಂದೂ, ಕಾರಾ ಧಿಕಾರಿಯನ್ನು ಕರವಸ್ತ್ರದಿಂದ ಮುಗ್ಧನನ್ನಾಗಿ ಮಾಡುವುದು

ಸುಲಭಸಾಧ್ಯವೆಂದೂ ನೀನು ಹೇಳುತ್ತಿರುವ ಮಾತು ನನಗೆ ಅರ್ಥವಾಗುತ್ತಿರುವುದು. ನಿನ್ನ ಅಭಿಪ್ರಾಯವು ಹೀಗೆಯೇ ಇರುವುದಾದರೆ, ನಾನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳುವ ಉಪಾಯವನ್ನು ಅವಲಂಬಿಸುವೆನು.

ಸರೋಜಸುಂದರಿ ! ನನ್ನ ಮನವು ನಿನ್ನೊಡನೆ ಸೇರಿಕೊಂಡಿರಬೇಕೆಂದು ಬಯಸುತ್ತಿರುವುದು ನನ್ನ ಬಲವತ್ತರವಾದ ಅಭಿಲಾಷೆಯನ್ನು ಅಡ್ಡಗಿಸುವುದಕ್ಕೆ ಈ ಬಂಧನಕ್ಕೆ ಆವ ಸಾಮರ್ಥ್ಯವೂ ಇಲ್ಲ. ನಾನು ಮನಸ್ಸುಮಾಡಿದರೆ ಈ ಬಂಧನದಿಂದ ಪಾರಾಗುವುದು ಅದೊಂದು ದೊಡ್ಡ ವಿಷಯವಲ್ಲ. ನಿನ್ನ ಅಭಿಪ್ರಾಯವೇ ನನ್ನ ಕರ್ತವ್ಯವು ಎಂದು ತಿಳಿದುಕೊಂಡಿರುವಾಗ, ನಾನು ಸರ್ವಪ್ರಯತ್ನದಿಂದಲೂ ಪಾರಾಗಲೇ ಬೇಕು, ಆದರೆ ಸಮಯವನ್ನು ನಿರೀಕ್ಷಿಸಿಕೊಂಡು ಕೆಲಸಮಾಡುವೆನು.''

ಮಧುಮಾಧವನು ಈ ಬಗೆಯಾಗಿ ಚಿಂತಿಸುತ್ತಾ ಕುಳಿತಿರುವಲ್ಲಿ ಅರ್ಧರಾತ್ರದ ಸಮಯವಾಯಿತು. ರಾತ್ರಿಯ ಎರಡು ಗಂಟೆಯ ಒಳಗಾಗಿ ತಪ್ಪಿಸಿಕೊಂಡು ಹೊರಟುಬರಬೇಕೆಂದು ಸರೋಜಸುಂದರಿಯು ಹೇಳಿದ್ದ ಮಾತು ತಟ್ಟನೆ ಆತನಿಗೆ ಜ್ಞಾಪಕಕ್ಕೆ ಬರಲು, ಆತನು ಮುಂದಣ ಕೆಲಸಕ್ಕೆ ಸೊಂಟಕಟ್ಟಿ ಸರೋಜಸುಂದರಿಯು ಗುಟ್ಟಾಗಿ ಕೊಟ್ಟಿದ್ದ ಕೈಗರಗಸದಿಂದ ಕಿಟಕಿಯ ಮರದ ಸಲಾಕೆಗಳನ್ನು ಕೊಯ್ಯುವುದಕ್ಕೆ ಮೊದಲುಮಾಡಿದನು. ಒಂದೆರಡು ಗಂಟೆಗಳ ಕಾಲದೊಳಗಾಗಿ ಈ ಕೆಲಸವು ನಡೆಯತಕ್ಕುದಲ್ಲವೆಂದು ಮಧುಮಾಧವನು ತಿಳಿದುಕೊಂಡು ಗರಗಸವನ್ನು ಒಂದೆಡೆಯಲ್ಲಿ ತೆಗೆದಿಟ್ಟು ಬಂಧಮೋಚನೆಗೆ ಕಾಲೋಚಿತವಾದ ಉಪಾಯವೇನೆಂಬುದನ್ನು ಪರಿಷರಿಯಾಗಿ ಚಿಂತಿಸಲಾರಂ

ಭಿಸಿದನು. ಚಿತ್ತಶಾಂತತೆಯಿಂದ ವರ್ತಿಸತಕ್ಕವನಿಗೆ ಉಪಾಯ ಗಳಿಗೇನೂ ಕಡಮೆಯಿರಲಾರದು ಆತುರಗಾರನಿಗೆ ಮಟ್ಟಿಗೆ ಬುದ್ಧಿ ಮಟ್ಟಾಗುವುದು. ಮಧುಮಾಧವನಿಗೆ ಒಂದು ಕ್ಷಣಕಾಲ ದೊಳಗಾಗಿ ಒಂದು ಮಾರ್ಗವು ಗೋಚರಿಸಿತು ಮನದಲ್ಲಿ ಉಪಾ ಯವು ಹೊಳೆದ ಕೂಡಲೆ, ಆತನು ಗಟ್ಟಿಯಾಗಿ ಅರಚಿಕೊಂಡನು. ಈ ಶಬ್ದವನ್ನು ಕೇಳಿದ ಕೂಡಲೆ, ಕಾರಾಧಿಕಾರಿಯು, ಏನೋ ಪಿಡುಗು ಬಂದಿತೆಂದು ಬೆಚ್ಚಿ ಬೆದರಿದವನಾಗಿ ತಡಮಾಡದೆಯೇ ಮಧುಮಾಧವನಿದ್ದಲ್ಲಿಗೆ ಬಂದು—ವಿಷಯವೇನು? ಎಂದು ಕೇಳಿ ದನು

ಮಧು—ನಾನು ನನ್ನ ತಪ್ಪನ್ನು ಒಪ್ಪಿಕೊಳ್ಳಬೇಕೆಂದು ಅಂತರಾತ್ಮನು ಪ್ರೇರಿಸುತ್ತಿರುವನು

ಕಾರಾಧಿಕಾರಿ—ಒಳ್ಳೆಯದೇ ಆಯಿತು ಬೆಳಗಾದ ಕೂಡಲೆ ಅಧಿಕಾರಿಗಳಿಗೆ ತಿಳಿಸುವೆನು

ಮಧು—ಚೆನ್ನಾಯಿತು, ಚೆನ್ನಾಯಿತು! ಮನಸ್ಸು ಚಂಚಲವಾದುದು. ಬೆಳಗಾಗುವುದರೊಳಗಾಗಿ ನನ್ನ ಈಗಣ ಮನವು ಏನಾಗಿ ಹೋಗುವುದೋ ಬಲ್ಲವರಾರು? ಕಾಲಹರಣದಿಂದ ನನಗೆ ಅಪಾಯವುಂಟೆಂದು ತೋರಿಬರುತ್ತಿರುವ ಕಾರಣ, ನಾನು ಹಣವನ್ನು ಹೂತಿಟ್ಟಿರುವ ಸ್ಥಲವನ್ನು ಕೊನೆಯ ಪಕ್ಷದಲ್ಲಿ ನಿನ್ನ ಕಿವಿಗಾದರೂ ಹಾಕಿಬಿಡುವೆನು ಇದರಿಂದ ನನಗೆ ಬಿಡುಗಡೆ ಯಾಗಿ ಬಹುಮಾನ ದೊರೆಯುವ ಸಂಭವವುಂಟು ಈ ಸುಯೋಗ ವನ್ನು ಕಳೆದುಕೊಂಡು ನಾನು ನಾಯಿಯ ಪರಿಗೂ ಮಣ್ಣು ತಿಂದು ಜೀವಿಸಲಾರೆನು. ಕಾರಾಧಿಕಾರಿ! ಇತ್ತಬಾ. ನಿನ್ನ ಕಿವಿ

ಯಲ್ಲಿ ಎಲ್ಲವನ್ನೂ ತಿಳಿಸಿಬಿಡುವೆನು. ನನ್ನ ಹರವು ಪ್ರಯೋಜನವಿಲ್ಲ.

ಕಾರಾಧಿಕಾರಿಯು ಈ ಮಾತನ್ನು ಕೇಳಿ ಮಧುಮಾಧವನು ಪಶ್ಚಾತ್ತಾಪಗೊಂಡು ಮಾರ್ಗಕ್ಕೆ ಬಂದಿರಬಹುದೆಂದು ಊಹಿಸಿಕೊಂಡವನಾಗಿ ಕೋಣೆಯ ಬಾಗಿಲನ್ನು ತೆರೆದುಕೊಂಡು ಒಳಗೆ ಬಂದು ಮಧುಮಾಧವನ ಬಳಿಯಲ್ಲಿ ನಿಂತನು. ಬಂದಿಯು ಅಧಿಕಾರಿಯನ್ನು ನೋಡಿ—ಮಹಾಶಯ! ಕುಳಿತು ಕೊಳ್ಳೋಣವಾಗಲಿ, ಎಂದನು.

ಕಾರಾಧಿಕಾರಿ—ಬಂದಿರುವೆನು ; ವಿಷಯವೇನೆಂಬುದನ್ನು ಬೇಗನೆ ತಿಳಿಸಿಬಿಡು.

ಮಧು—ಅದಕ್ಕಾಗಿಯೇ ನಿನ್ನನ್ನು ಕರೆದುದು. ಆ ಹೂತಿಟ್ಟ ಸ್ಥಲವು ತಮಗೆ ಗೊತ್ತಿಲ್ಲವಾದುದರಿಂದ, ನಾನು ಮೊದಲು ಒಂದು ಪತ್ರದಲ್ಲಿ ಅದರ ದಿಕ್ಕನ್ನು ಬರೆದು ತೋರುವೆನು. ಇದರಿಂದ ಸುಲಭವಾಗಿ ದಿಕ್ಪ್ರದರ್ಶನ ಮಾಡಿದಂತಾಗುವುದು

ಕಾರಾಧಿಕಾರಿ—ಆಗಬಹುದು.

ಮಧು—ಮಹಾಶಯ! ಅದ್ಯಕಥಾಪ್ರಾರಂಭಕ್ಕೆ ಕೊಂಚವಾದರೂ ಪೂರ್ವಕಥಾನುವಾದವು ಬೇಕಾಗುವುದಿಲ್ಲವೇ?

ಕಾರಾಧಿಕಾರಿ—ಅದೂ ನಡೆಯಲಿ

ಮಧು—ಹಾಗಾದರೆ ಸಾವಧಾನವಾಗಿ ಕೇಳೋಣವಾಗಲಿ.

ಮಧುಮಾಧವನು, ಈ ರೀತಿಯಾಗಿ ಮಾತನಾಡುತ್ತಿರುವಾಗಲೇ ಕಣ್ಣುಮುಚ್ಚಿ ತೆಗೆಯುವುದರೊಳಗಾಗಿ ತನ್ನ ಕರವಸ್ತ್ರದಿಂದ ಅಧಿಕಾರಿಯ ಮುಖವನ್ನು ಒರಸಿದನು. ಅಧಿಕಾರಿಯು ಕೂಡಲೆಯೇ ಜ್ಞಾನತಪ್ಪಿ ಕೆಳಗೆ ಬೀಳಲು, ಸರೋಜಸುಂದರಿಯು ತಂದು ಕೊಟ್ಟಿದ್ದ ಸಣ್ಣ ಹಗ್ಗದಿಂದ ಆತನ ಕೈಕಾಲುಗಳನ್ನು ಚೆನ್ನಾಗಿಯೂ ಬಿಗಿದು ಒಂದೆಡೆಯಲ್ಲಿ ಉರುಳಿಸಿದ ಬಳಿಕ, ಮಧುಮಾಧವನು ತನ್ನ ವೇಷವನ್ನು ಬೇರೊಂದು ತೆರನಾಗಿ ಮಾರ್ಪಡಿಸಿಕೊಂಡು ಆರಿಗೂ ಸಂಶಯವಾಗದ ರೀತಿಯಲ್ಲಿ ಕಾರಾಗಾರದಿಂದ ಪಾರಾಗಿಬಿಟ್ಟನು. ಆಗ ರಾತ್ರಿಕಾಲದ ತಂಗಾಳಿಯು ಮಧುಮಾಧವನನ್ನು ಸ್ಪರ್ಶಮಾಡಿದಾಗ, ಆತನಿಗುಂಟಾದ ಪರಮಾನಂದವು ವರ್ಣನಾತೀತವು ಇಂತಹ ಪರಮಾನಂದದ ಮಧ್ಯದಲ್ಲಿ, ಆತನು ಆಲೋಚಿಸಿದನು —

“ನನಗೆ ಇಂತಹ ಮುಕ್ತಿಮಾರ್ಗವನ್ನು ಕಲ್ಪಿಸಿಕೊಟ್ಟ ಸರೋಜಸುಂದರಿಗೆ ನನ್ನ ಪ್ರಾಣವನ್ನೇ ಧಾರೆಯುರೆದರೂ ನಾಲದುದಾಗಿದೆ. ಆಕೆಯು ನನಗೆ ಒತ್ತಾಸೆಯಾಗಿ ನಿಲ್ಲದಿದ್ದರೆ, ನನ್ನ ಪಾಡು ನಾಯ ಪಾಡಾಗಿಹೋಗುತಿದ್ದಿತು. ಅಲ್ಲದೆಯೂ ಅನಂತ ಕಾಲದ ವರೆಗೂ ನಾನು ಅಪರಾಧಿಯೆಂಬುದು ನೆಲೆಯಾಗಿ ನಿಂತು ಹೋಗುತಿದ್ದಿತು ಆಕೆಯ ಬುದ್ಧಿಯೇ ಬುದ್ಧಿ ; ಆಕೆಯ ಧೈರ್ಯವೇ ಧೈರ್ಯ ; ಆಕೆಯ ಯುಕ್ತಿಯೇ ಯುಕ್ತಿ ; ಆಕೆಯ ಚಮತ್ಕಾರವೇ ಚಮತ್ಕಾರ. ಆಕೆಯ ಬಳಿಯಲ್ಲಿಯೇ ಇರಬೇಕೆಂದು ನನ್ನ ಮನವು ಆವಾಗಲೂ ಬಯಸುತ್ತಿರುವುದು ಇಷ್ಟಾದರೂ ಆಕೆಯ ರಹಸ್ಯವೇ ನನಗೆ ಗೊತ್ತಾಗಲೊಲ್ಲದು. ಆಕೆಯ ರಹಸ್ಯಗಳು ಬೇಕಾದ ಹಾಗೆ ಇರಲಿ, ಆಕೆಯು ನನಗೆ ಮಾಡಿದ ಅಪ್ರಾರ್ಥಿತವಾದ ಮಹೋಪ

ಕಾರಕ್ಕೆ ನಾನು ಪ್ರತಿಯಾಗಿ ಏನ ಮಾಡಬಲ್ಲವನಾಗಿರುವೆನು? ಹೆರರಿಗೆ ಆವಾಗಳೂ ಉಪಕಾರವನ್ನೇ ಮಾಡುವ ಮಹಾತ್ಮರು ಪ್ರತ್ಯುಪಕಾರವನ್ನು ಎಂದಿಗೂ ಬಯಸರು ಪ್ರತ್ಯುಪಕಾರವನ್ನು ಬಯಸಿ ಉಪಕಾರಮಾಡತಕ್ಕವರು ವ್ಯಾಪಾರಿಗಳಂತೆ ಸಾಮಾನ್ಯ ರೆನಿಸಿಕೊಳ್ಳುವರು ಇಂತಹವರ ವಿಷಯದಲ್ಲಿ ನಾವು ಕೃತಜ್ಞ ರಾಗಿರಬೇಕಾದುದೇನೂ ಇರುವುದಿಲ್ಲ

ಸರೋಜಸುಂದರಿಯು ಪ್ರತ್ಯುಪಕಾರವನ್ನು ಬಯಸದ ಪರೋಪಕಾರಿಣಿಯೇ ಅಹುದು, ಇದರಲ್ಲಿ ಕಿಂಚಿತ್ತಾದರೂ ಸುಳ್ಳಿಲ್ಲ ಹಿಂದೊಂದು ಸಲ ಆಕೆಯು ನನ್ನನ್ನು ಕುರಿತು, 'ನಾನು ನಿನ್ನನ್ನು ರಕ್ಷಿಸುವೆನು; ಬಳಿಕ ನೀನು ನನ್ನನ್ನು ರಕ್ಷಿಸ ಬೇಕೆಂದು ನಾನು ಇಷ್ಟೆಲ್ಲಾ ಪ್ರಯತ್ನಪಡುತ್ತಿರುವುದು,' ಎಂದು ಹೇಳಿದಳು. ಇದು ಉಪಕಾರ ಪ್ರತ್ಯುಪಕಾರವೆಂಬ ವ್ಯಾಪಾರದ ಧರ್ಮವಾಗಲಿಲ್ಲವೆ? ಇದು ಆಕೆಯ ಸಹಜವಾದ ಉದ್ದೇಶವಲ್ಲ. ನನ್ನನ್ನು ಪರೀಕ್ಷಿಸುವುದಕ್ಕಾಗಿ ಆಕೆಯು ಈ ಮಾತನ್ನು ಆಡಿದ್ದರೂ ಆಡಿರಬಹುದು. ಬಲುಮಾತಿನಿಂದೇನು? ಉದಾರಚರಿತರ ವ್ಯವ ಹಾರದಲ್ಲಿ ನಾವು ಅರ್ಥವನ್ನು ಕಲ್ಪಿಸಬಾರದು."

ಮಧುಮಾಧವನು ಹೀಗೆಲ್ಲಾ ಆಲೋಚಿಸಿಕೊಂಡ ಬಳಿಕ, ಸರೋಜಸುಂದರಿಯು ಮೊದಲೇ ಸೂಚಿಸಿದ್ದ ಸಂಕೇತ ಸ್ಥಾನ ವನ್ನು ಕುರಿತು ತೆರಳಿದನು.

ಆ ಸಂಕೇತ ಸ್ಥಾನವು ಕಾರಾಗಾರಕ್ಕೆ ಐದು ಮೈಲಿಗಳ ದೂರದಲ್ಲಿದ್ದಿತು ಅದು ಬೆಟ್ಟಗಳ ನಡುವೆ ದಟ್ಟವಾಗಿ ಬೆಳೆದಿದ್ದ ಕಾಡಿನ ಮಧ್ಯದಲ್ಲಿದ್ದುದರಿಂದ, ಅದನ್ನು 'ಮಾರಿಯ ಕಣಿವೆ'

ಎಂದು ಜನರು ಹೇಳಿಕೊಳ್ಳುತ್ತಿದ್ದರು. ಹಗಲ ಹೊತ್ತಿನಲ್ಲಿ ಕೂಡ ಜನರು ಅಲ್ಲಿಗೆ ಹೋಗುವುದಕ್ಕೆ ಅಂಜುತ್ತಿದ್ದರು ಮಧುಮಾಧವನು ಈ ಮಾರಿಯ ಕಣಿವೆಗೆ ನಿಯಮಿತವಾದ ಕಾಲಕ್ಕೆ ಮುಂಚಿತವಾಗಿಯೇ ಬಂದು ಸುತ್ತಲೂ ನೋಡಿದನು ಅಲ್ಲಿ ಪ್ರಾಣಿ ಮಾತ್ರದ ಸಂಚಾರವೇ ಕಂಡು ಬರಲಿಲ್ಲ ಸರೋಜಸುಂದರಿಯು ಕಾಲಕ್ಕೆ ಸರಿಯಾಗಿ ಬರಬಹುದೆಂದು ನಿರೀಕ್ಷಿಸಿದನು ಆಕೆಯ ಸುಳಿವೇ ಇಲ್ಲ. ಹೀಗೆಯೇ ಮತ್ತೆರಡು ಗಂಟೆಗಳ ಕಾಲವೂ ಕಳೆದು ಹೋಯಿತು. ಆದರೂ ಏನೂ ಪ್ರಯೋಜನವಾಗಲಿಲ್ಲ. ಬಳಿಕ ಮಧುಮಾಧವನು ಭಯದಿಂದ ನಡುಗಲಾರಂಭಿಸಿದನು ಆದರೆ ಮತ್ತೆ ಪತ್ತೆದಾರರ ಕೈಗೆ ಸಿಕ್ಕಿಬಿದ್ದು ಕಾರಾಗೃಹದ ಬಾಗಿಲನ್ನು ಮೆಟ್ಟಲಾರೆನೆಂದು ಆತನಿಗೆ ನಂಬುಗೆ ಇದ್ದಿತಾದುದರಿಂದ, ಮಧುಮಾಧವನು ಧೈರ್ಯದಿಂದ ಕಾಲವನ್ನು ಕಳೆಯಲಾರಂಭಿಸಿದನು.

ಒಂದು ವೇಳೆ ಆಕೆಯು ಕಾರಣಾಂತರಗಳಿಗೆ ಒಳಪಟ್ಟು ಬಾರದೇ ಇದ್ದಲ್ಲಿ, ಅರುಣೋದಯದ ವೇಳೆಗಾದರೂ ಆಕೆಯಿದ್ದಲ್ಲಿಗೆ ಹೋಗಿ ಮುಂದಣ ಕರ್ತವ್ಯವನ್ನು ನೆರವೇರಿಸುವೆನೆಂದು ಸಿದ್ಧಾಂತ ಮಾಡಿಕೊಂಡನು

---

## ಏಳನೆಯ ವಿಲಾಸ

### ವಿಚಿತ್ರವ್ಯಾಪಾರ

ಸರೋಜಸುಂದರಿಯು ಕಾಲಕ್ಕೆ ಸರಿಯಾಗಿ ಬಾರದಿರುವುದರಿಂದ, ಮಧುಮಾಧವನು ಉತ್ಸಾಹವಿಲ್ಲದವನಾಗಿ, ರಾತ್ರಿಯನ್ನು ಹೇಗಾದರೂ ಕಳೆಯಬೇಕೆಂದು ನಿಶ್ಚಯಮಾಡಿಕೊಂಡು ಒಂದು

ಮರದ ಬುಡವನ್ನು ಆಶ್ರಯಿಸಿ ಕುಳಿತನು. ಆತನ ದೇಹದಲ್ಲಿ ತ್ರಾಣವಿರಲಿಲ್ಲ, ಹೃದಯದಲ್ಲಿ ಉತ್ಸಾಹವಿರಲಿಲ್ಲ, ಮುಖದಲ್ಲಿ ರಸ ವಿರಲಿಲ್ಲ. ಮೂರ್ತೀಭವಿಸಿದ ಈ ದುರವಸ್ಥೆಯನ್ನು ಆರು ತಾನೇ ನೋಡಿ ಸಹಿಸಿಯಾರು? ಬದುಕಬೇಕೆಂಬ ಆಸೆಯು ಮನುಷ್ಯ ರನ್ನು ಸಲ್ಲದ ಸಂಕಟಗಳಿಗೆ ಈಡುಮಾಡುವುದು, ಆದರೂ ಮಾನ ವನು ಎಲ್ಲವನ್ನೂ ಬಾಯಿ ಮುಚ್ಚಿಕೊಂಡು ಸಹಿಸುವನು. ಮಧು ಮಾಧವನು ಅಂತಹ ವಿಷಮಾವಸ್ಥೆಯಲ್ಲಿಯೂ ಎದೆಗೆಡದೆ ಭಗ ವಂತನನ್ನು ಧ್ಯಾನಿಸುತ್ತಾ ಕುಳಿತಿರುವಲ್ಲಿ, ವನದೇವತೆಯೋ ಎಂ ಬಂತೆ ಸರೋಜಸುಂದರಿಯು ಆತನ ಇದಿರಿನಲ್ಲಿ ಬಂದು ನಿಂತಳು. ಮಧುಮಾಧವನು ಭಗವಂತನಲ್ಲಿ ತಾನು ಮಾಡಿದ ಪ್ರಾರ್ಥನೆಯು ಫಲಿಸಿತೋ ಎಂಬಂತೆ ಸಂತೋಷದಿಂದ ಆನಂದಾಶ್ರುವನ್ನು ಸುರಿ ಸಿದನು.

ಸರೋಜಸುಂದರಿಯು ಬಂದಕೂಡಲೆ—ಮಹಾಶಯ! ನನ್ನ ಮಾತಿನಂತೆ ತಪ್ಪಿಸಿಕೊಂಡು ಬಂದೆಯಾ? ಎಂದು ನಗುತ್ತಾ ಪ್ರಶ್ನೆಮಾಡಿದಳು

ಮಧು—ನಾನು ಬಂದಿರುವೆನು

ಸರೋಜ—ನಾನು ನಿನ್ನನ್ನು ಬಲುಹೊತ್ತು ಕಾದು ಕೊಂಡಿರುವಂತೆ ಮಾಡಿದೆನಲ್ಲವೇ?

ಮಧು—ಅಹುದು; ನನ್ನ ಉತ್ಸಾಹವೆಲ್ಲವೂ ಒಣಗಿಯೇ ಹೋಗಿದ್ದಿತು.

ಸರೋಜ—ನಾವು ಮುಂದೆ ಮಾಡಬೇಕಾದ ಕೆಲಸವು ತುಂಬಾ ಇರುವುದರಿಂದ, ಇಷ್ಟು ಬೇಗನೆ ಉತ್ಸಾಹಹೀನರಾಗ

ಬಾರದು. ನಾವು ಅಲ್ಪಕ್ಕೆಲ್ಲಾ ಎದೆಗೆಟ್ಟು ಕುಳಿತರೆ, ದೊಡ್ಡ ದೊಡ್ಡ ಕೆಲಸಗಳು ನೆರವೇರಿದಂತೆಯೇ ಸರಿ. ಇದು ಹಾಗಿರಲಿ. ನೀನು ಹೇಗೆ ತಪ್ಪಿಸಿಕೊಂಡು ಬಂದೆ ?

ಮಧುಮಾಧವನು ತಾನು ತಪ್ಪಿಸಿಕೊಂಡು ಬಂದ ರೀತಿಯನ್ನು ವಿಶದವಾಗಿ ತಿಳಿಸಿದನು. ಸರೋಜಸುಂದರಿಯು ಆನಂದದಿಂದ ಕೇಳಿದ ಬಳಿಕ—ಮಧು ಮಹಾಶಯ ! ನೀನು ಮಾಯಾ ಮಾರೀಚನ ಉಪಾಯವನ್ನೇ ಅವಲಂಬಿಸಿದೆ, ಎಂದಳು

ಮಧು—ನನ್ನ ಶಕ್ತಿಸಾಹಸಗಳಲ್ಲಿ ನಿನಗೆ ನಂಬುಗೆಯೇ ಇದ್ದಂತೆ ಕಂಡು ಬರುತ್ತಿಲ್ಲ

ಸರೋಜ—ನಾನು ನಿನ್ನನ್ನು ಇಲ್ಲಿಯ ವರೆಗೂ ಸಾಧು ಪ್ರಾಣಿಯೆಂದು ನಂಬಿದ್ದೆನು.

ಮಧು—ನಾನು ಸಿಂಹ ವಿಕ್ರಮನೆಂಬುದು ಮುಂದಾದರೂ ಗೊತ್ತಾದೀತು.

ಸರೋಜ—ನಾವು ಕೈಕೊಂಡ ಕೆಲಸದಲ್ಲಿ ಸಿಂಹ ವಿಕ್ರಮನಂಥವನೇ ಬೇಕಾಗಿರುವುದು.

ಮಧು—ನಾನು ಎಂತಹ ಸಮಯದಲ್ಲಿ ಹೇಗಿರಬೇಕೋ ಹಾಗೆಲ್ಲಾ ಇರಬಲ್ಲೆನು

ಸರೋಜ—ಅಂದಿನ ರಾತ್ರಿಯಲ್ಲಿ ಕಳುವಾದ ಹಣವು ಇರುವ ಸ್ಥಲವನ್ನು ನಾನು ಬಲ್ಲೆನು. ಈ ವಿಷಯದಲ್ಲಿ ನಾನು ಪತ್ತೇದಾರನ ಕೆಲಸವನ್ನು ಚೆನ್ನಾಗಿಯೂ ಮಾಡಬೇಕಾಯಿತು.

ಈಗ ನಾವು ಅಲ್ಲಿಗೆ ಹೋಗಿ ಆ ಹಣದ ಗಂಟನ್ನು ಸ್ವಾಧೀನಕ್ಕೆ ತೆಗೆದುಕೊಂಡು ಒಂದೆಡೆಯಲ್ಲಿ ಅವಿತಿಡೋಣ. ಅದು ನಮ್ಮ ಸಮಯಕ್ಕೆ ಉಪಯೋಗಕ್ಕೆ ಬಂದೀತು

ಮಧು—ನಾವು ಅವಿತಿಡಬೇಕೇ?

ಸರೋಜ—ಅಹುದು

ಮಧು—ಅದೇಕೆ?

ಸರೋಜ—ನಾವು ಈಗಳೇ ಹಣವನ್ನು ಒಪ್ಪಿಸಿಬಿಡುವುದಾದರೆ, ಕಳ್ಳತನವು ನಮ್ಮ ಮೇಲೆಯೇ ಹೊರುವುದು. ನಾವು ಹಣವನ್ನು ಈಗ ಕೊಡಲೇ ಕೂಡದು. ಕಳ್ಳರು ಸಿಕ್ಕಿದ ಬಳಿಕ, ನಾವು ಹಣವನ್ನು ಸಲ್ಲಿಸಿದಲ್ಲ ನಮಗೆ ತುಂಬಾ ಗೌರವವೇ ಉಂಟಾದೀತು.

ನನ್ನ ಊಹೆಯು ಸರಿಯಾದುದು ನಮ್ಮ ಬೀಡಾರದ ಸುತ್ತಲೂ ಸಂಚರಿಸುತ್ತಿದ್ದವನೇ, ಆ ಮೂವರು ಕಳ್ಳರನ್ನೂ ವಂಚಿಸಿ ಹಣದ ಗಂಟನ್ನು ಸಾಗಿಸಿಬಿಟ್ಟನು. ಅವನೆಂತಹ ಕಳ್ಳರಿಗೆ ಕಳ್ಳನಾಗೀರಬೇಕು! ಪ್ರಪಂಚದಲ್ಲಿ ನಾವೇ ಬುದ್ಧಿಮಂತರೆಂದರೆ, ನಮಗಿಂತಲೂ ಬುದ್ಧಿಮಂತರು ಇದ್ದೇ ಇರುವರು. ಆ ಕಳ್ಳರ ಕಳ್ಳನು, ಮುಂದಕ್ಕೆ ಉಪಯೋಗವಾಗಬಹುದೆಂದು ಆ ಹಣದ ಗಂಟನ್ನು ಒಂದೆಡೆಯಲ್ಲಿ ಅವಿತಿಟ್ಟನು. ನಾನು ಆತನ ಹಿಂದೆ ಹಿಂದೆಯೇ ಹೋಗಿ ಅವರ ಸ್ಥಾನವನ್ನು ಅರಿತುಕೊಂಡು ಬಂದಿರುವೆನು. ಈಗ ನಾವು ಕಳ್ಳರ ಕಳ್ಳನಿಗೆ ಕಳ್ಳರಂತಾಗಿ ಹೋಗಿ, ಆ ಹಣದ ಗಂಟನ್ನು ಕದ್ದು ತರಬೇಕಾಗಿರುವುದು.

ಇದಾದ ಮೇಲೆಯೇ ನಮ್ಮ ನಿಜವಾದ ಕೆಲಸಕ್ಕೆ ಪ್ರಾರಂಭಿಸಿ ದಂತಾಗುವುದು.

ಮಧು—ಸರೋಜ! ಇದೊಂದು ಅದ್ಭುತವಾದ ಅಸಮ ಸಾಹಸವೇ ಸರಿ.

ಸರೋಜ—ಇದರಲ್ಲಿ ಅದ್ಭುತವಾದ ಅಸಮಸಾಹಸ ಯಾವುದು?

ಮಧು—ಸ್ವಭಾವದಿಂದ ಹೆಂಗುಸಾಗಿ ರಾತ್ರಿಯ ಅವೇಳೆ ಗಳಲ್ಲಿ ಧೈರ್ಯಗೊಂಡು ಆವುದಕ್ಕೂ ಲಕ್ಷ್ಯಮಾಡದೆ ಈ ರೀತಿ ಯಾಗಿ ನುಗ್ಗುವುದು ಅಸಮಸಾಹಸವಲ್ಲವೇ?

ಸರೋಜ—ಇದಕ್ಕೇ ಇಷ್ಟು ಆಶ್ಚರ್ಯಪಡುವವನು, ನನ್ನ ಜೀವನ ಚರಿತ್ರೆಯನ್ನು ಕೇಳಿದ ಮೇಲೆ ಮತ್ತೆಷ್ಟು ಆಶ್ಚರ್ಯ ಪಡುವೆಯೋ ನಾನು ಕಾಣೆನು. ಇವೆಲ್ಲವೂ ನನಗೆ ಸಾಮಾನ್ಯ ವಾದ ದಿನಚರ್ಯೆಗಳು. ಮುಂದೆಲ್ಲವೂ ಗೊತ್ತಾಗುವುದು.

ಮಧು—ನಾನು ಅವೆಲ್ಲವನ್ನೂ ಅರಿವುದಕ್ಕಾದರೂ ಬದುಕಿರುವೆನು. ಅದೃಷ್ಟವು ನಮ್ಮಿಬ್ಬರನ್ನೂ ಒಂದೆಡೆಯಲ್ಲಿ ಸೇರಿಸಿ, ನಿನ್ನಿಂದ ನನ್ನ ಕೆಲಸವನ್ನು ಸುಮುಖವಾಗುವಂತೆ ನೆರವೇರಿಸಿ ಕೊಡಬೇಕಾದರೆ, ಇದರಲ್ಲಿ ಆರ ಅದೃಷ್ಟವು ಬಲವತ್ತರವಾಗಿರ ಬೇಕು?

ಸರೋಜ—ನನಗೆ ನಿನ್ನಲ್ಲಿ ಅಭಿಮಾನವಿರುವುದರಿಂದ, ನಾನು ನಿನ್ನ ನಿರಪರಾಧವನ್ನು ಸಮರ್ಥನ ಮಾಡುವುದಕ್ಕಾಗಿ ಕಾರ್ಯಭಾರವನ್ನು ತಲೆಯ ಮೇಲೆ ಹೊತ್ತೆನು. ನಿನ್ನ ಕೆಲಸ

ವಾದ ಮೇಲೆ ನನ್ನ ಕೆಲಸಕ್ಕೆ ನಾವಿಬ್ಬರೂ ತೊಡಗುವ. ನನ್ನ ಕೆಲಸಕ್ಕೆ ಒಬ್ಬ ನಂಬುಗೆಗೆ ತಕ್ಕುವನು ಬೇಕಾಗಿರುವುದು ನೋಡಿದುದರಲ್ಲಿ, ನೀನು ನಂಬುಗೆಗೆ ತಕ್ಕವನೇ ಆಗಿರುವೆ. ಈ ಕಾರಣದಿಂದಲೂ ನಾನು ನಿನ್ನ ಪಕ್ಷವನ್ನು ಅವಲಂಬಿಸಿ ಹೋರಾಡುತ್ತಿರುವೆನು. ನಿನ್ನ ಪಕ್ಷಾವಲಂಬನಕ್ಕೆ ಇದೇ ಮುಖ್ಯಕಾರಣವಲ್ಲ; ಅನೇಕಕಾರಣಗಳಲ್ಲಿ ಇದೂ ಒಂದಾಗಿರಬಹುದು.

ಈ ಮಾತುಗಳನ್ನು ಕೇಳಿದ ಮಧುಮಾಧವನಿಗೆ ಉಂಟಾದ ಆನಂದಕ್ಕೆ ತುದಿಮೊದಲೇ ಇರಲಿಲ್ಲ ವಿಕಸಿತವಾದ ಪುಷ್ಪದ ಮಧ್ಯದಲ್ಲಿ ಒಂದು ಕೀಟವು ಸೇರಿಕೊಂಡಂತೆ, ಇವನ ಆನಂದದಲ್ಲಿ ಒಂದು ಚಿಂತೆಯು ಆಗಿಂದಾಗ ತಲೆದೋರುತ್ತಿದ್ದಿತು. ಆಕೆಯ ರಹಸ್ಯವನ್ನು ಭೇದಿಸಿ ತಿಳಿದುಕೊಳ್ಳಬೇಕೆಂಬ ಚಿಂತೆಯೊಂದೇ ಆತನನ್ನು ಆಗಿಂದಾಗ ಸಂಕಟ ಪಡಿಸುತ್ತಿದ್ದಿತು ಈ ಚಿಂತೆಯ ಪ್ರಭಾವದಿಂದ ಆತನು ಮತ್ತೆಮತ್ತೆ ಚಿಂತಿಸಿದುದೇನೆಂದರೆ—

"ಈಕೆಯಲ್ಲಿ ಹೆಂಗುಸಿನ ಚರ್ಯೆಯೊಂದೂ ಕಾಣಬರುತ್ತಿಲ್ಲ. ಈಕೆಯು ಆವಾಗಳೂ ಗಂಡಸಿನಂತೆಯೇ ಕೆಲಸಮಾಡುವುದರಲ್ಲಿ ಮುಂದುವರಿಯುತ್ತಿರುವಳು. ಹೆಂಗುಸಿಗೆ ನಾಚುಗೆಯೆಂಬುದು ಪರಮಭೂಷಣವು. ಇದನ್ನು ಅತಿಕ್ರಮಿಸಿದ ಮೇಲೆ ಹೆಂಗುಸಿಗೂ ಗಂಡಸಿಗೂ ಭೇದವೇನು? ನಾಚುಗೆಗೆಟ್ಟ ಅನೇಕ ಸ್ತ್ರೀಯರು ಪಾತಿತ್ಯಕ್ಕೆ ತವರುಮನೆಯಾಗಿರುವುದನ್ನು ನಾನು ಕಣ್ಣಾರೆ ನೋಡಿರುವೆನು. ಈಕೆಯಲ್ಲಿಯೂ ಆದೋಷವೇನಾದರೂ ಕಾಲ ಹಾಕಿಕೊಂಡಿರ ಬಹುದೇ? ಶಿವಶಿವ! ನನ್ನ ಜೀವನಪ್ರದಾತ್ರಿಯಾದ ಸರೋಜಸುಂದರಿಯಲ್ಲಿ ಈ ದುರ್ಭಾವನೆಯೇ? ಗಂಡಸು ಆವಾಗಳೂ ಸಂಶಯಾತ್ಮನು. "ಸಂಶಯಾತ್ಮಾ ವಿನಶ್ಯತಿ," ಎಂಬು

ವನ್ನು ತಿಳಿತಿಳಿದೂ ಗಂಡಸು ಹಾಳಾಗಿ ಹೋಗುತ್ತಿರುವನು. ನನಗೆ ಈ ದುರ್ಬುದ್ಧಿಯು ಹುಟ್ಟಬಹುದೇ? ನ್ಯಾಯಮಾರ್ಗದಲ್ಲಿರುವುದಕ್ಕಾಗಿ ಹೆಂಗುಸು ಧೈರ್ಯವನ್ನು ಅವಲಂಬಿಸಿ ಕೆಲಸಮಾಡುವುದಾದರೆ, ನಾವು ಅವರ ಸ್ವಭಾವದಲ್ಲಿ ಕಳಂಕವನ್ನು ತಂದೊಡ್ಡಬಹುದೇ? ಶುದ್ಧವಾಗಿ ಬಾಳಬೇಕೆಂಬ ಪ್ರತಿಜ್ಞೆಯುಳ್ಳ ಹೆಂಗುಸನ್ನು ಕಿಡಿಸುವುಕ್ಕೆ ಆವ ಗಂಡಸಿಗೆ ತಾನೇ ಸಾಹಸವುಂಟಾದೀತು? ಕೆಡಬೇಕೆಂದಿರುವ ಸ್ತ್ರೀಯರ ಸುದ್ದಿಯನ್ನು ಆಡಿಕೊಂಡು ನಾವು ನಮ್ಮ ಪವಿತ್ರವಾದ ನಾಲಗೆಯನ್ನು ಅಪವಿತ್ರವನ್ನಾಗಿ ಅದೇಕೆ ಮಾಡಿಕೊಳ್ಳಬೇಕು?

ಸರೋಜಸುಂದರಿಯು ನನಗಾಗಿ ಹೋರಾಡಿದ ಮಾತ್ರಕ್ಕೆ ಎಲ್ಲರಲ್ಲಿಯೂ ಹೀಗೆಯೇ ವರ್ತಿಸುವಳೆಂದು ಹೇಳುವುದಕ್ಕೆ ಸಾಕಾದಷ್ಟು ಕಾರಣಗಳು ದೊರೆಯಲಾರವು ನನ್ನಲ್ಲಿನ ಅಭಿಮಾನಕ್ಕಾಗಿ ಈಕೆಯು ನನ್ನ ಪಕ್ಷವನ್ನು ಅವಲಂಬಿಸಿರುವಳೆಂದು ಅಡಿಗಡಿಗೆ ಹೇಳುತ್ತಿರುವಳು. ಇದು ಅಭಿಮಾನವೋ—ಇಲ್ಲವೆ, ಅನುರಾಗವೋ? ನನಗಾದರೋ ಇನ್ನೂ ಇದರ ಸುಳಿವೇ ಗೊತ್ತಾಗಲೊಲ್ಲದು. ಹೆಂಗುಸರು ಪುರುಷನಲ್ಲಿನ ಅನುರಾಗದ ಬಲದಿಂದ ಎಂತಹ ಕೆಲಸವನ್ನಾದರೂ ಮಾಡಿ ಪ್ರಿಯನಿಗೆ ಸಂತೋಷವನ್ನುಂಟುಮಾಡಿರುವರು, ಎಂದು ನಾನು ಅನೇಕ ಗ್ರಂಥಾವಲೋಕನದಿಂದ ತತ್ತ್ವವನ್ನು ಅರಿತುಕೊಂಡಿರುವೆನು—ಎಂದ ಮೇಲೆ, ಈಕೆಯು ಅನುರಾಗದ ಬಲದಿಂದಲೇ ನನ್ನ ಕ್ಷೇಮಕ್ಕಾಗಿ ಕೆಲಸ ಮಾಡುತ್ತಿರುವಳೆಂದು ನಾನೇಕೆ ಊಹಿಸಬಾರದು? ಈಕೆಯು ನನ್ನನ್ನು ನಿಜವಾಗಿಯೂ ಪ್ರೀತಿಸುವಳು. ನನ್ನ ಪ್ರೀತಿಯನ್ನು ಪರೀಕ್ಷಿಸುವುದಕ್ಕಾಗಿ ಈಕೆಯು ಗೋಪ್ಯರೀತಿಯಿಂದ ಇದ್ದರೂ ಇರಬಹುದು. ಹೆಂಗುಸರ ಮನ

ಸ್ಸನ್ನು ಕಂಡವರಾರು? "ಒಲಿದರೆ ನಾರಿ; ಒಲಿಯದಿದ್ದರೆ ಮಾರಿ."

ಮಧುಮಾಧವನು ಹೀಗೆಂದು ಚಿಂತಿಸಿದ ಬಳಿಕ—ಸರೋಜ! ಮುಂದಣ ಕೆಲಸವೇನು? ಎಂದನು

ಸರೋಜ—ಹಣವನ್ನು ಸಂಗ್ರಹಿಸಿಟ್ಟುಕೊಳ್ಳುವುದನ್ನು ಬಿಟ್ಟರೆ, ಈಗ ನಮಗೆ ಮತ್ತಾವ ಕೆಲಸ ತಾನೇ ಇರುವುದು? ಆ ಕಳ್ಳರ ಕಳ್ಳನು ಹಣದ ಗಂಟನ್ನು ಕದ್ದುಕೊಂಡು ಹೋದುದನ್ನು ನಾನು ಕಣ್ಣಾರೆ ನೋಡಿ, ಇದರಲ್ಲೇನೋ ತತ್ತ್ವವಿರಬೇಕೆಂದೂ, ನಾನು ಆತನನ್ನು ಅನುಸರಿಸುವುದರಿಂದ ಮುಂದೆ ಪ್ರಯೋಜನ ವಿರುವುದೆಂದೂ ತಿಳಿದವಳಾಗಿ ಆತನ ಹಿಂದೆ ಹಿಂದೆಯೇ ಗುಟ್ಟಾಗಿ ತೆರಳಿದೆನು ಆತನು ಅದನ್ನು ಒಂದೆಡೆಯಲ್ಲಿ ಭದ್ರಪಡಿಸಿ ಬಲು ಹೊತ್ತು ಹಿಂದೆ ಮುಂದೆ ನೋಡುತ್ತಿದ್ದು, ಇದು ಆರಿಗೂ ಗೋಚರ ವಾಗಲಿಲ್ಲವೆಂದು ಸಿದ್ಧಾಂತಪಡಿಸಿಕೊಂಡು ಅಲ್ಲಿಂದ ಹೊರಟು ಹೋದನು ನಾನು ಅದನ್ನು ಆಗಳೆಯೇ ತೆಗೆದುಕೊಂಡು ಬರ ಬಹುದಾಗಿದ್ದಿತು, ಆದರೆ ಆತನು ಎಲ್ಲಿಯಾದರೂ ಅಡಗಿಕೊಂಡು ನೋಡುತ್ತಿರಬಹುದೆಂಬ ಶಂಕೆಯು ನನಗುಂಟಾಗಲು, ನಾನು ಅದರ ಗೋಜಿಗೆ ಹೋಗದೆಯೇ ಹಿಂದಿರುಗಿ ಬಂದು ಬಿಟ್ಟೆನು.

ಮಧು—ಆ ಪ್ರದೇಶವು ಇಲ್ಲಿಗೆ ಎಷ್ಟು ದೂರವಾಗಿರು ವುದು?

ಸರೋಜ—ಸರಿಯಾದ ದಾರಿವಿಡಿದು ತೆರಳುವುದಾದರೆ, ನಾವು ಕಟಂಕಟಯಾಗಿ ಹನ್ನೊಂದು ಮೈಲಿಗಳ ದಾರಿಯನ್ನು ದಾಟಬೇಕಾಗುವುದು. ಈ ಬೆಟ್ಟದ ಸರಹದ್ದಿನಲ್ಲಿ ಕಾಲದಾರಿ

ಯೊಂದಿರುವುದು. ನಾವು ಆವುದಕ್ಕೂ ಭಯಪಡದೆ ಈಗಳೇ ಹೊರಡುವುದಾದರೆ, ಒಂದು ಗಂಟೆಯ ಕಾಲದೊಳಗಾಗಿ ಅಲ್ಲಿಗೆ ಹೋಗಬಹುದು. ಬಳಿಕ ನಾವು ಆ ಗಂಟನ್ನು ತೆಗೆದುಕೊಂಡು ರಾಜನಗರಕ್ಕೇ ಹೊರಟು ಹೋಗಬೇಕು.

ಮಧು—ನೀನೂ ನನ್ನೊಡನೆಯೇ ರಾಜನಗರಕ್ಕೆ ಬರುವೆಯಾ?

ಸರೋಜ—ಅಪ್ಪಣೆಯಾದರೆ ಬರುವೆನು.

ಮಧು—ನಿನ್ನ ಮಾನ್ಯವಾದ ಕೆಲಸದ ಗತಿ?

ಸರೋಜ—'ವಿಟ್ಠಲ ಭಟ್ಟರ ಪುರಾಣ ಬಿಟ್ಟಲ್ಲಿಗೆ,' ಎನ್ನುವಂತೆ ನನ್ನ ಕೆಲಸ. ನನಗೆ ಮುಂದೆ ಮಾಡಬೇಕಾದ ಕೆಲಸವು ಅಪರಿಮಿತವಾಗಿರುವುದರಿಂದ, ಇದನ್ನೇ ನಂಬಿ ಕುಳಿತರೆ ನಾಗೀತೇ? ಮಧುಮಹಾಶಯ! ತಲೆಯನ್ನು ಮರೆಮಾಚಿಕೊಂಡಿರುವುದಕ್ಕಾಗಿ ನಾನು ಆಕೆಲಸವನ್ನು ಒಪ್ಪಿಕೊಂಡಿದ್ದೆನು. ಇಂದಿಗೆ ಅಲ್ಲಿಯ ಕೆಲಸವು ಮುಗಿದುದು. ಇನ್ನು ನಾವು ರಾಜನಗರಕ್ಕೆ ಹೋಗಿ ಪ್ರಮಾಣಗಳಿಂದ ನಿಜವಾದ ಕಳ್ಳರನ್ನು ಪತ್ತೆಮಾಡಿ ಸರಕಾರಕ್ಕೆ ಒಪ್ಪಿಸಬೇಕು. ಇದರಿಂದಲೇ ನೀನು ನಿರಪರಾಧಿಯೆಂದು ಸಿದ್ಧಾಂತವಾಗಬೇಕಾಗಿರುವುದು. ಬಳಿಕ ನಾವು ಆ ಹಣವನ್ನು ಯೋಗನಾರಾಯಣನಿಗೆ ಸಲ್ಲಿಸಿ ಆತನಿಂದ ವಾಗ್ದತ್ತವಾದ ೧೦,೦೦೦ ರೂಪಾಯಿಗಳನ್ನು ಬಹುಮಾನವಾಗಿ ಪಡೆದುಕೊಳ್ಳಬೇಕು. ನಮಗೆ ಈಗ ಹಣದಿಂದ ತುಂಬಾ ಪ್ರಯೋಜನವಿರುವುದು.

ಸರೋಜಸುಂದರಿಯು ಹೀಗೆ ಹೇಳಿ ಮಧುಮಾಧವನನ್ನು ತನ್ನ ಜತೆಯಲ್ಲಿಯೇ ಕರೆದುಕೊಂಡು ಕಾಲದಾರಿವಿಡಿದು ಒಂದು ಗಂಟೆಯ ಕಾಲವೆನ್ನುವುದರೊಳಗಾಗಿ ಆ ಹಣವಿದ್ದ ಸ್ಥಲಕ್ಕೆ ಬಂದು ಸೇರಿದರು. ಆಗ ಸರೋಜಸುಂದರಿಯು ತಾನು ತಂದಿದ್ದ ಗುದ್ದಲಿಯೊಂದನ್ನು ಮಧುಮಾಧವನ ಕೈಗೆ ಕೊಟ್ಟು, ಆ ಕಲ್ಲಿನ ಅಡಿಯಲ್ಲಿ ಹಣವು ಹುಗಿದಿಡಲ್ಪಟ್ಟಿರುವುದು, ಎಂದು ದಿಗ್ದರ್ಶನ ಮಾಡಿದಳು ಮಧುಮಾಧವನು ಆಕೆಯ ಮಾತಿನಂತೆಯೇ ಆ ಸ್ಥಲಕ್ಕೆ ಹೋಗಿ ಹಣದ ಗಂಟನ್ನು ಎತ್ತಿಕೊಂಡು ನಿಂತನು ಅಷ್ಟರೊಳಗಾಗಿ, ಎಲ್ಲಿಂದಲೋ ಒಂದು ಗುಂಡು ಹಾರಿಬಂದು ಮಧುಮಾಧವನ ಹೆಗಲನ್ನು ಸವರಿಕೊಂಡು ಹೋಯಿತು ಮಧುಮಾಧವನು, 'ನಾನು ಗುಂಡಿನಿಂದ ಹೊಡೆಯಲ್ಪಟ್ಟೆನು,' ಎಂದು ಹೇಳುತ್ತಾ ಕೆಳಗೆ ಬಿದ್ದುಬಿಟ್ಟನು. ಕೂಡಲೆಯೇ ಆವನೋ ಒಬ್ಬನು ಬಂದೂಕವನ್ನು ಹಿಡಿದುಕೊಂಡು ಅಲ್ಲಿಗೆ ಓಡಿಬಂದನು

ಸರೋಜಸುಂದರಿಯು ಇನ್ನು ಸುಮ್ಮನಿರುವುದು ತರವಲ್ಲವೆಂದು ತಿಳಿದು ಬಾರುಮಾಡಿದ ಪಿಸ್ತೂಲನ್ನು ಹಿಡಿದುಕೊಂಡು ಒಂದೇ ಉಸಿರಿಗೆ ಮಧುಮಾಧವನ ಬಳಿಗೆ ಬಂದು ನಿಂತಳು ಮಧುಮಾಧವನು, ಈಕೆಯು ಬಂದುದನ್ನು ನೋಡಿ ಎದ್ದು ನಿಂತು ಬಂದೂಕದವನ ಮೇಲೆ ಬಿದ್ದನು ಆ ಬಂದೂಕದವನು ಪಿಸ್ತೂಲನ್ನು ನೋಡಿದ ಕೂಡಲೆ, ಬದುಕಿದರೆ ಸಾಕೆಂದು ಹೇಳಿಕೊಂಡು ಜಿಂಕೆಯಂತೆ ಕಾಲಿಗೆ ಬುದ್ಧಿ ಹೇಳಿಬಿಟ್ಟನು

ಬಳಿಕ ಸರೋಜಸುಂದರಿಯು ಮನಸ್ಸಿಗೆ ಸಮಾಧಾನವನ್ನು ತೆಗೆದುಕೊಂಡು—ಮಧುಮಹಾಶಯ! ಈತನಿಂದ ಮತ್ತಾವ ತೊಂದರೆಯೂ ಬರಲಾರದು, ಆದರೂ ನಾವು ಇಲ್ಲಿರುವುದು

ಅಪಾಯಕರವು. ಈ ಹಣದ ಗಂಟನ್ನು ತೆಗೆದುಕೊಳ್ಳು ನಾವು ನಿರಪಾಯವಾದ ಸ್ಥಳಕ್ಕೆ ಹೋಗಿ ಹಣವನ್ನೂ ನಮ್ಮನ್ನೂ ರಕ್ಷಿಸಿಕೊಳ್ಳುವ, ಎಂದಳು.

ಅಷ್ಟು ಹೊತ್ತಿಗೆ ಅರುಣೋದಯದ ಸಮಯವಾಯಿತು. ಅಸ್ಫುಟವಾದ ಆ ಬೆಳಕಿನಲ್ಲಿ ಮಧುಮಾಧವನು ಸರೋಜಸುಂದರಿಯ ಮುಖದಲ್ಲಿ ಕಾರ್ಯಸಾಧನೆಯಿಂದುಂಟಾಗಬಹುದಾದ ಒಂದು ಬಗೆಯ ತೃಪ್ತಿಯನ್ನು ಕಂಡು ಮುಗುಳು ನಗೆಯನ್ನು ನಕ್ಕು—ಸರೋಜ! ಗುಂಡಿನ ಪೆಟ್ಟನಿಂದ ನನ್ನ ಹೆಗಲಿಗೆ ವಿಶೇಷವಾದ ಯಾತನೆಯೇನೂ ಉಂಟಾಗಿಲ್ಲ ನಾನು ಎಲ್ಲಿಗೆ ಬೇಕಾದರೂ ಹೊರಡಲು ಸಿದ್ಧನಾಗಿರುವೆನು ನಾನು ಕಾರಾಗಾರದಿಂದ ತಪ್ಪಿಸಿಕೊಂಡು ಬಂದಿರುವುದರಿಂದ, ಹತ್ತಾರು ಜನರು ನನ್ನನ್ನು ಹುಡುಕುವುದಕ್ಕಾಗಿ ಎಲ್ಲೆಲ್ಲಿಯೂ ಸಂಚರಿಸುತ್ತಿರಬಹುದು. ಈ ಚಿಂತೆಯು ನನ್ನ ಮನದಲ್ಲಿ ಕಿರುಕುಳವನ್ನುಂಟುಮಾಡುತ್ತಿರುವುದು, ಎಂದು ನುಡಿದನು.

ಸರೋಜ—ಆ ಭಯಕ್ಕೆ ಆಸ್ಪದವಿಲ್ಲದ ಹಾಗೆ ನಾನು ತಕ್ಕ ಏರ್ಪಾಡು ಮಾಡಿರುವೆನು. ನಿನ್ನ ದೇಹದಲ್ಲಿ ನಡೆಯುವುದಕ್ಕೆ ಶಕ್ತಿಯಿರುವುದಷ್ಟೇ?

ಮಧು—ಶಕ್ತಿಯಿಲ್ಲದೇ ಏನು? ಹತ್ತು ಮೈಲಿಗಳನ್ನಾದರೂ ಅನಾಯಾಸವಾಗಿ ನಡೆಯಬಲ್ಲೆನು.

ಸರೋಜ—ಇದೇ ನಮ್ಮ ಭಾಗ್ಯೋದಯವು.

ಮಧು—ಸರೋಜ! ಮತ್ತೆ ಆ ಬಂದೂಕದವನ ಭಯವೇನೂ ಇಲ್ಲವಷ್ಟೇ?

ಸರೋಜ—ಇಂತಹ ಅಂಜುಕುಳಿಯಿಂದ ಭಯವೆಂದ ರೇನು? ದಂಡಿಗೆ ಅಂಜಲಿಲ್ಲ, ದಾಳಿಗೆ ಅಂಜಲಿಲ್ಲ; ದಾಸಯ್ಯನ ಕುಣಿಮಿಣಿಗೆ ಅಂಜುವ ಕಾಲವು ಇನ್ನೂ ಬಂದಿಲ್ಲ.

ಮಧು—ಆತನು ನಿನ್ನನ್ನು ಗುರುತಿಸಿ ಕಾಡುವುದಾದರೆ?

ಸರೋಜ—ಆತನು ನನ್ನನ್ನು ಈ ರೂಪವಲ್ಲಿ ಆವಾಗಲೂ ನೋಡಿಲ್ಲ. ನಾನು ಎಚ್ಚರಿಕೆಯಿಂದಲೇ ಇರುತ್ತಿರುವೆನು

ಮಧು—ಸರೋಜ! ನಮ್ಮಿಬ್ಬರಿಗೂ ಪರಸ್ಪರ ಪರಿಚಯವುಂಟಾಗಿ ಇನ್ನೂ ಎರಡು ದಿನಗಳು ಪೂರ್ಣವಾಗಿಲ್ಲ. ಇಷ್ಟರಲ್ಲಿಯೇ ನೀನು ನನಗೆ ಇಷ್ಟು ಸಾಹಾಯ್ಯವನ್ನು ಕಲ್ಪಿಸಿಕೊಟ್ಟುದಕ್ಕಾಗಿ ನಾನು ನಿನಗೆ ಚಿರಕಾಲದ ಋಣಿಯಾಗಿರುವೆನು.

ಸರೋಜ—ಲೋಕದಲ್ಲಿ ಪ್ರತಿಯೊಂದು ಪ್ರಾಣಿಯೂ ಸ್ವಾರ್ಥಕ್ಕಾಗಿಯೇ ಯತ್ನಮಾಡುತ್ತಿರುವುದು. ನಿನಗೆ ಉಪಕಾರ ಮಾಡುವುದರಲ್ಲಿ ನನಗೂ ಸ್ವಾರ್ಥವಿರಬಹುದು.

ಮಧು—ಸರೋಜ! ನಿನ್ನ ಮಾತನ್ನು ನಂಬಲಾರೆ. ಪಂಚಭೂತಗಳು ಆವ ಸ್ವಾರ್ಥಕ್ಕಾಗಿ ಪರೋಪಕಾರವನ್ನೆಸಗುವುವು? ಪಂಚಭೂತಗಳ ಸಮಷ್ಟಿಶಕ್ತಿಯಿಂದ ಜನ್ಮವನ್ನೆತ್ತಿರುವ ನೀನು ಸ್ವಾರ್ಥಕ್ಕಾಗಿ ಕೆಲಸಮಾಡುವುದೆಂದರೇನು? ನೀನು ನನ್ನನ್ನು ಪರೀಕ್ಷಿಸುವುದಕ್ಕಾಗಿ ಹೀಗೆಲ್ಲಾ ಮಾತನಾಡುತ್ತಿರುವೆ.

ಸರೋಜ—ಮಧುಮಹಾಶಯ! ಈ ಸ್ತೋತ್ರಭಾಗವು ನಿನ್ನ ವಿಶ್ವಾಸದ ಪ್ರಭಾವವು. ವಿಶ್ವಾಸವೆಂಬುದು ಸಮಸ್ತದೋಷಗಳನ್ನೂ ಮುಚ್ಚತಕ್ಕುದು. ಈಗ ವಿಶ್ವಾಸದ ಮಾತಿಗೆ ಕಾಲವಲ್ಲ;

ಈಗ ನಾವು ನಿರಪಾಯವಾದ ಪ್ರದೇಶವನ್ನು ಹುಡುಕಿಕೊಂಡು ಬಹುದೂರವಾಗಿ ಪ್ರಯಾಣಮಾಡಬೇಕಾಗಿರುವುದು.

ಸರೋಜಸುಂದರಿಯು ಹೀಗೆ ಹೇಳಿ ಮಧುಮಾಧವನನ್ನು ಜತೆಯಲ್ಲಿ ಕರೆದುಕೊಂಡು ಬೆಟ್ಟಗುಡ್ಡಗಳ ಗೋಪ್ಯವಾದ ಕಾಲ ದಾರಿಯನ್ನು ಹಿಡಿದುಕೊಂಡು ತೆರಳಿದಳು. ಸಂಧ್ಯಾಕಾಲದ ವರೆಗೂ ಪ್ರಯಾಣವು ಬಳೆಯಿತು. ಉತ್ಸಾಹದಲ್ಲಿ ಆರೊಬ್ಬರಿಗೂ ಆಯಾಸವೆಂಬುದೇ ಕಾಣಲಿಲ್ಲ ಇಬ್ಬರೂ ಬಲು ಹೊತ್ತು ನಡೆದ ಬಳಿಕ ಸರೋಜಸುಂದರಿಯು ಮಧುವನ್ನು ಕುರಿತು–ಮಹಾಶಯ! ಇಷ್ಟು ಹೊತ್ತಿಗೆ ನಾವು ಎಷ್ಟು ದೂರ ನಡೆದಿರಬಹುದು? ಎಂದು ಕೇಳಿದಳು.

ಮಧು—ಮೂವತ್ತು ಮೈಲಿಗೆಳಿಗೇನೂ ಕಡಮೆಯಿಲ್ಲ ವೆಂದು ತೋರುವುದು ನಾನು ಇದೇ ರೀತಿಯಲ್ಲಿ ಇನ್ನೆಷ್ಟು ದೂರ ನಡೆಯಬೇಕಾದೀತು, ಸರೋಜ?

ಸರೋಜ—ದಾರಿಯೆಲ್ಲವೂ ಕಳೆದುದು. ಈಗ ದೂರ ದಲ್ಲಿ ಕಾಣುವ ದೀಪವಿರತಕ್ಕ ಸ್ಥಲಕ್ಕೆ ನಾವು ಹೋಗಬೇಕಾಗಿರು ವುದು. ಅಲ್ಲಿಯೇ ನಮಗೆ ತಾತ್ಕಾಲಿಕವಾದ ವಾಸಸ್ಥಾನವು.

ಮಧು—ಸರೋಜ! ನಿನ್ನ ವ್ಯವಹಾರವು ದುರ್ಭೇದ್ಯ ವಾದುದು. ನಿನ್ನ ಅಡುಗೂಳಜ್ಜಿಯ ಬೀಡಾರವೆಲ್ಲಿ? ಈಗ ನೀನು ತೋರುತ್ತಿರುವ ಸುಂದರವಾದ ಉಪ್ಪರಿಗೆಯ ಮನೆಯೆಲ್ಲಿ? ನಾನು ನಿನ್ನ ಮರ್ಮವನ್ನು ಆವ ರೀತಿಯಿಂದಲೂ ಉದ್ಘಾಟನೆ ಮಾಡುವು ದಕ್ಕೆ ಸಾಧ್ಯವಾಗದಿರುವುದು.

ಸರೋಜ—ಮಹಾಶಯ! ಅದನ್ನು ಕಟ್ಟಿಕೊಂಡಾಗುವುದೇನು? ಈಗ ನಮಗೆ ಬೇಕಾಗಿರುವುದು ನಿರಪಾಯವಾಗಿರುವ ಆಶ್ರಯವು. ಇಷ್ಟನ್ನು ನಾವು ಸರಿಪಡಿಸಿಕೊಂಡರೆ, ನಮಗೆ ಸ್ವರ್ಗವೇ ದೊರೆತಂತಾಗುವುದು.

ಸರೋಜಸುಂದರಿಯು ಹೀಗೆ ಮಾತುಕತೆಗಳನ್ನಾಡಿಕೊಂಡು ರಾತ್ರಿಯ ವೇಳೆಗೆ ಸರಿಯಾಗಿ ಆ ಮನೆಯ ಬಳಿಗೈತಂದು ಒಂದು ಸೀಟಿಯನ್ನು ಊದಿದಳು. ಕೂಡಲೆಯೇ ದಾಸಿಯೊಬ್ಬಳು ಬಾಗಿಲನ್ನು ತೆರೆದು—ಸರೋಜ, ಬಂದೆಯಾ! ಒಳಗೆ ಬಾ, ಎಂದು ನುಡಿದಳು.

ಸರೋಜಸುಂದರಿಯು ಮಧುಮಾಧವನನ್ನು ಕರೆದುಕೊಂಡು ಮನೆಯೊಳಗೆ ಪ್ರವೇಶಮಾಡಿ—ಮಾದಿ! ನಾವಿಬ್ಬರು ಬಂದಿರುವೆವು, ಎಂದಳು

ಮಾದಿ—ನನಗೆ ತುಂಬಾ ಸಂತೋಷವಾಯಿತಮ್ಮ! ಈಗಳಾದರೂ ನಮ್ಮ ಮೇಲೆ ಕೃಪೆಯಿಟ್ಟು ಬಂದೆಯಲ್ಲಾ; ಇಂದೇ ನಮಗೆ ಮಹೋತ್ಸವವು.

ಸರೋಜ—ಮಾದಿ! ನಮ್ಮ ಮಿತ್ರಮಹಾಶಯರೊಬ್ಬರು ಅತಿಥಿಯಾಗಿ ಇಲ್ಲಿಗೆ ಬಂದಿರುವರು ಅವರಿಗೆ ಇಲ್ಲಿ ಭೋಜನೋಪಚಾರಗಳಿಗೇನೂ ಕುಂದುಕೊರತೆಗಳಿಲ್ಲವಷ್ಟೇ?

ಮಾದಿ—ನಿಮ್ಮ ಮನೆಯಲ್ಲಿ ಕುಂದುಕೊರತೆಯೆಂದರೇನು?

ಮಧುಮಾಧವನು ಇವರಿಬ್ಬರ ಸಂಭಾಷಣೆಯನ್ನು ಕೇಳಿ ಬೆರಗಾಗಿ ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡು ಮಂದಿರಾಂತಃ ಪ್ರದೇಶದ ಸೊಬಗನ್ನು ನೋಡುತ್ತಾ ಕುಳಿತುಬಿಟ್ಟನು. ಅಲ್ಲಿ ಒಂದೊಂದು ಪದಾರ್ಥವೂ ಆಯಾ ಸ್ಥಾನದಲ್ಲಿ ಚೊಕ್ಕಟವಾಗಿಡಲ್ಪಟ್ಟಿದ್ದಿತು ಆರು ನೋಡಿದರೂ, ಇದನ್ನು ರಾಜಯೋಗ್ಯವಾದ ಪ್ರದೇಶವೆಂದೇ ಅಭಿಪ್ರಾಯುಪಡುವಷ್ಟು ಸುಂದರವಾಗಿದ್ದಿತು. ಅಲ್ಲಿಯ ಅಮೂಲ್ಯವಾದ ಚಿತ್ರಪಟಗಳ ವೈಖರಿಯನ್ನು ನೋಡಿ ಮಧುಮಾಧವನು ತನ್ನ ಮೈಯೆಲ್ಲಾ ಕಣ್ಣಾಗಿದ್ದರೆ, ಈ ಸೊಬಗನ್ನು ಆನಂದದಿಂದ ನೋಡಬಹುದಾಗಿದ್ದಿತೆಂದು ಆಲೋಚಿಸಿದನು.

ಸರೋಜಸುಂದರಿಯು ಮಧುಮಾಧವನ ಮನೋಭಾವವನ್ನು ಅರಿತುಕೊಂಡವಳಾಗಿ—ಮ ಧು ಮ ಹಾ ಶ ಯ ! ನೀನು ಮಾರ್ಗಾಯಾಸದಿಂದ ಬಳಲಿ ಬೆಂಡಾಗಿ ಹೋಗಿರುವೆ ನಮ್ಮ ಮಾದಿಯು ನಿನಗೆ ಎಲ್ಲದಕ್ಕೂ ಅನುಕೂಲಿಸುವ ಅದೊಂದು ಸುಂದರವಾದ ಕೋಣೆಯನ್ನು ತೋರುವಳು ಅಲ್ಲಿ ನಿನಗೆ ಬೇಕಾದ ಅನುಕೂಲ್ಯವೆಲ್ಲವೂ ಸಿದ್ಧಪಡಿಸಲ್ಪಟ್ಟಿರುವುದು ನೀನು ಅಲ್ಲಿಗೆ ಹೋಗಿ ವಿಶ್ರಾಂತಿಯನ್ನು ತೆಗೆದುಕೊಳ್ಳು ಬೆಳಗಾದ ಮೇಲೆ ಮುಂದಣ ಕರ್ತವ್ಯವನ್ನು ಸಿದ್ಧಾಂತಪಡಿಸಿಕೊಳ್ಳುವ, ಎಂದು ನಗೆಯೊಡನೆ ಮಾತನಾಡಿದಳು.

ಮಧುಮಾಧವನು ಭ್ರಾಂತನಾಗಿ ಕುರಿಯಂತೆ ಮಾದಿಯನ್ನು ಅನುಸರಿಸಿ ತೆರಳಿದನು ಮಾದಿಯು ಅತಿಥಿಯನ್ನು ಮಹಡಿಯ ಮೇಲೆ ಕರೆದುಕೊಂಡು ಹೋಗಿ ಅಲ್ಲಿ ಒಂದು ಕೋಣೆಯಲ್ಲಿ ಕುಳ್ಳಿರಿಸಿ—ಪ್ರಭೂ ! ತಾವು ಇಲ್ಲಿ ಯಥೇಚ್ಛವಾಗಿ ವಿಶ್ರಾಂತಿ

ಸುಖವನ್ನು ಬೆಳಗಾಗುವ ವರೆಗೂ ಅನುಭವಿಸಬಹುದು · ಆಹಾರಾದಿಗಳನ್ನು ತಾವಿದ್ದೆಡೆಗೆ ತಂದು ಬಡ್ಡಿಸುವೆನು. ತಾವು ಆವುದಕ್ಕೂ ಸಂಕೋಚ ಪಡಬೇಕಾದುದೇನೂ ಇರುವುದಿಲ್ಲ. ತಮ್ಮ ಸೇವೆಗಾಗಿ ಈ ದಾಸಿಯೇ ಸಿದ್ಧಳಾಗಿರುವಳು, ಎಂದು ಹೇಳಿ ಅಲ್ಲಿಂದ ತನ್ನ ಕೆಲಸಕ್ಕೆ ಹೊರಟುಹೋದಳು.

---

## ಎಂಟನೆಯ ವಿಲಾಸ

### ಪತ್ತೇದಾರನ ಮಗಳು

ದಾಸಿಯಾದ ಮಾದಿಯು ಹೊರಟುಹೋದ ಮೇಲೆ, ಮಧುಮಾಧವನು ಕೋಣೆಯ ಬಾಗಿಲನ್ನು ಹಾಕಿಕೊಂಡು ಬಂದು ಒಂದು ಸುಖಾಸನದ ಮೇಲೆ ಕುಳಿತು ಚಿಂತಿಸಿದನು :—

"ಇದೆಲ್ಲವೂ ಗಂಧರ್ವನಗರದ ಮಾಯಾವಿಲಾಸವು ನಾನು ಎಚ್ಚರವಾಗಿದ್ದುಕೊಂಡು ಈ ಕೆಲಸಗಳೆಲ್ಲವನ್ನೂ ನಡೆಯಿಸುತ್ತಿರುವೆನೇ—ಇಲ್ಲವೆ, ಇದು ಸ್ವಪ್ನವೇ? ನಿಜವಾಗಿಯೂ ಯೋಗನಾರಾಯಣನ ಕೋರಿಗೆ ಬೆಂಕಿಯೂ ಬೀಳಲಿಲ್ಲ, ಕಳ್ಳತನವೂ ಆಗಲಿಲ್ಲ ; ಆ ತಪ್ಪಿಗಾಗಿ ನಾನು ಕಾರಾ ಪ್ರವೇಶವನ್ನೂ ಮಾಡಲಿಲ್ಲ ; ನಾನು ಸರೋಜಸುಂದರಿಯನ್ನೂ ನೋಡಲಿಲ್ಲ ; ಆ ರಮಣೀಮಣಿಯು ನನ್ನ ಉದ್ಧಾರಕ್ಕಾಗಿ ಆವ ಪ್ರಯತ್ನವನ್ನೂ ಮಾಡಲಿಲ್ಲ. ಸತ್ಯವಾಗಿ ಇದೆಲ್ಲವೂ ಸ್ವಪ್ನವೃತ್ತಾಂತವು. ನಾನು ನಿದ್ರೆಯಿಂದ ಎಚ್ಚೆತ್ತ ಮೇಲೆ, ಈ ಸ್ವಪ್ನದ ಫಲವನ್ನು ಕೇಳಿ ತಿಳಿದುಕೊಳ್ಳುವೆನು."

ಮಧುಮಾಧವನು ಮತ್ತೆ ಚಿಂತಿಸಿದನು :—

“ ನಾನು ಎಚ್ಚರವಾಗಿಯೇ ಇರುವೆನು. ಜಾಗರದಲ್ಲಿ ಸ್ವಪ್ನವೆಂದರೇನು? ಇಲ್ಲಿಯ ವರೆಗೂ ನಡೆದುದೆಲ್ಲವೂ ಸತ್ಯವಾದುದು. ನಾನು ನಿಜವಾಗಿಯೂ ಗೃಹತ್ಯಾಗಿ, ಕುಲತ್ಯಾಗಿ, ಹಾಗೂ ದೇಶತ್ಯಾಗಿ. ನನ್ನ ಭಾಗದ ಸೌಭಾಗ್ಯದೇವತೆಯಾದ ಸರೋಜಸುಂದರಿಯು ನನ್ನನ್ನು ಉದ್ಧಾರಮಾಡಿರುವಳು ಅದು ಮಾನವ ಲೋಕದ ಉದ್ಧಾರವಲ್ಲ; ಅದು ದೇವಲೋಕದ ದಿವ್ಯತರವಾದ ಉದ್ಧಾರವು. ಈಕೆಯು ಆರಿರಬಹುದು? ಆ ಅಡುಗೊಳಜ್ಜಿಯ ಬೀಡಾರದಲ್ಲಿ ದಾಸಿಯ ವೃತ್ತಿಯನ್ನು ಅವಲಂಬಿಸಿಕೊಂಡಿದ್ದ ಸರೋಜಸುಂದರಿಯನ್ನು ನಾನು ಮೊದಲು ನೋಡಿದುದು; ಈಗೆ ನೋಡಿದರೆ, ಆಕೆಯು ಗಂಧರ್ವ ನಗರದ ರಾಜನ ಅರಮನೆಯಲ್ಲಿರುವಳು. ಆಕೆಯೇ ಈಕೆಯೇ—ಇಲ್ಲವೆ, ಇಬ್ಬರೂ ಬೇರೆಯೇ? ನನ್ನ ಅನುಭವದಲ್ಲಿ ಇಬ್ಬರೂ ಒಂದೇ ಎಂದು ಬೋಧವಾಗುತ್ತಿರುವುದು. ಇದನ್ನು ಆರಾದರೂ ನಂಬ ಬಹುದೇ? ಹಾಗೆಂದರೇನು? ನಂಬಲೇ ಬೇಕು. ನಂಬುವುದಕ್ಕಿಂತಲೂ ಕೇಳಿ ತಿಳಿಯುವುದು ಮೇಲಲ್ಲವೇ? ಅಲ್ಲವೆನ್ನುವರಾರು? ಕೇಳಿಯೇ ತಿಳಿಯಬೇಕು ನಾನು ಕಾದು ಬಿದ್ದಿದ್ದಾದರೂ ಕೇಳಿ ತಿಳಿದುಕೊಳ್ಳದೇ ಬಿಡೆನು.”

ಮಧುಮಾಧವನು ಹೀಗೆ ಚಿಂತಿಸುತ್ತಾ ಕುಳಿತಿರುವಾಗಲೇ ನಿದ್ರಾಂಗನೆಯು ಆವರಿಸಿಬಿಟ್ಟಳು ಆತನು ಮತ್ತೆ ಕಣ್ಣು ತೆರೆದು ನೋಡಿದಾಗ, ಸೂರ್ಯದೇವನು ಗಗನ ಮಂಡಲದಲ್ಲಿ ಒಂದು ಮಾರಿನಷ್ಟು ದೂರ ದಾರಿಯನ್ನು ಸಾಗಿಬಿಟ್ಟದ್ದನು. ಮಧುಮಾಧವನು ತುಂಬಾ ಹೊತ್ತಾಗಿ ಹೋಯಿತೆಂದು ದಿಗಿಲುಬಿದ್ದವನಾಗಿ ತಟ್ಟನೆ ಯೆದ್ದು ಪ್ರಾತಃಕೃತ್ಯವನ್ನು ತೀರಿಸಿಕೊಂಡು ನೂತನ ವಸ್ತ್ರಗಳಿಂದ ತನ್ನ ವೇಷಭೂಷೆಗಳನ್ನು ಮಾರ್ಪಡಿಸಿದ ಬಳಿಕ, ಈ

ನೂತನ ರೂಪಿನಿಂದ ಸರೋಜಸುಂದರಿಯನ್ನು ಬೆರಗು ಮಾಡ ಬೇಕೆಂದು ಮಹಡಿಯಿಂದಿಳಿದು ಕೆಳಗೆ ಬಂದು ನೋಡುವಲ್ಲಿ ಸರೋಜಸುಂದರಿಯು ಮಹಾಲಕ್ಷ್ಮಿಯಂತೆ ತಳತಳಿಸುತ್ತಾ ನಿಂತಿದ್ದಳು. ಆಕೆಯು ತನ್ನ ಹಾವಭಾವಗಳನ್ನು ತೋರ್ಪಡಿಸ ದೆಯೇ—ಮಹಾಶಯ! ರಾತ್ರಿಯು ಸುಖನಿದ್ರೆಯಿಂದ ಕಳೆಯಿ ತಷ್ಟೇ? ಎಂದು ಪ್ರಶ್ನೆಮಾಡಿದಳು.

ಮಧು—ಕಳೆಯಿತು.

ಸರೋಜ—ಪ್ರಾತಃಕಾಲದ ಒಂಬತ್ತು ಗಂಟೆಯಾದರೂ ನೀನು ಕೆಳಗಿಳಿದು ಬಾರದಿರುವುದನ್ನು ನೋಡಿ ನನಗೆ ಭಯ ವಾಯಿತು.

ಮಧು—ಭಯಕ್ಕೆ ಕಾರಣವೇನಿದ್ದಿತು?

ಸರೋಜ—ರಾತ್ರಿಯಲ್ಲಿ ನೀನು ಮತ್ತೆಲ್ಲಿಗಾದರೂ ಪಲಾ ಯನವಾಗಿರಬಹುದೆಂದು ನಾನು ಬಹಳವಾಗಿ ಹೆದರಿಹೋಗಿ ದ್ದೆನು.

ಮಧು—ಕೃತಜ್ಞತಾರಜ್ಜುವು ನನ್ನನ್ನು ಬಿಗಿದು ಕಟ್ಟಿ ಹಾಕಿರುವಲ್ಲಿ, ನಾನು ನಿನ್ನಿಂದ ಓಡಿಹೋಗುವುದೆಂದರೇನು? ಎಲ್ಲಿಗೆ ತಾನೇ ಓಡಿಹೋಗಲಿ?

ಸರೋಜ—ಈಗೆ ಪ್ರಾತರಾಶಕ್ಕೆ ಸರಿಯಾದ ಕಾಲ ವಾಗಿರುವುದು. ನಾನು ಈ ಸಂದರ್ಭದಲ್ಲಿ ಅನೇಕ ರಹಸ್ಯಗಳನ್ನು ನಿನಗೆ ಬಿಚ್ಚಿ ಹೇಳುವೆನು. ಇದರಿಂದ ನಿನ್ನ ಇಷ್ಟಾರ್ಥವು ಕೊಂಚ ಮಟ್ಟಿಗಾದರೂ ಪೂರ್ಣವಾಗಬಹುದು.

ಮಧು—ಸರೋಜ! ಈ ನೂತನ ವೇಷದಲ್ಲಿ ನನ್ನನ್ನು ಗುರುತಿಸ ಬಲ್ಲೆಯಾ?

ಸರೋಜ—ಗುರುತಿಸ ಬಲ್ಲೆನು.

ಮಧು—ಅದು ಹೇಗೆ?

ಸರೋಜ—ನೀನು ಯೋಗನಾರಾಯಣನ ಕೋರಿಯಲ್ಲಿ ಕೆಲಸಮಾಡಿಕೊಂಡಿದ್ದಾಗಿನಿಂದಲೂ, ನಾನು ನಿನ್ನನ್ನು ಬಲ್ಲೆನು.

ಮಧು—ಹಾಗೆಯೇ!

ಸರೋಜ—ಇಷ್ಟು ಹೊತ್ತಿಗೆ ನಿನಗೆ ತುಂಬಾ ಹಸಿವಾಗಿರಬಹುದು.

ಮಧು—ಹಸಿವೇನೋ ಆಗುತ್ತಿರುವುದು.

ಸರೋಜಸುಂದರಿಯು ಮಧುಮಾಧವನನ್ನು ಕರೆದುಕೊಂಡು ಭೋಜನಶಾಲೆಗೆ ಬಂದಳು. ಅಲ್ಲಿ ಬಗೆಬಗೆಯ ಫಲಾಹಾರದ್ರವ್ಯಗಳು ಭೋಜನಕ್ಕಾಗಿ ಸಿದ್ಧಪಡಿಸಲ್ಪಟ್ಟಿದ್ದುವು. ಇಬ್ಬರೂ ಭೋಜನಕ್ಕೆ ಕುಳಿತರು. ತರುವಾಯ ಸರೋಜಸುಂದರಿಯು ನಗುತ್ತಾ— ಮಧು ಮಹಾಶಯ! ನನ್ನ ವ್ಯಾಪಾರಗಳೆಲ್ಲವೂ ನಿನಗೆ ಆಶ್ಚರ್ಯಕರವಾಗಿಯೇ ತೋರುತ್ತಿದೆಯಲ್ಲವೇ? ಎಂದು ನುಡಿದಳು.

ಮಧು—ಅಹುದು.

ಸರೋಜ—ನಾನು ಗಂಧರ್ವನಗರದ ರಾಣಿಯಲ್ಲವೇ?

ಮಧು—ನೀನು ಜಗದೊಡೆಯನ ಭಾಗ್ಯದೇವತೆ.

ಸರೋಜ—ಇದೆಲ್ಲವೂ ನನ್ನದೆಂದಲ್ಲವೇ ನಿನ್ನ ಭಾವನೆ? ನಿಜವಾಗಿಯೂ ಹೇಳು.

ಮಧು—ನಾನು ಹೇಗೆ ಊಹಿಸಬೇಕೋ ಅದೇ ಗೊತ್ತಾಗಲಿಲ್ಲ

ಸರೋಜ—ಅಡಗೂಳಜ್ಜಿಯ ದಾಸಿಯೊಡನೆ ಕುಳಿತು ಭೋಜನಮಾಡುವುದಕ್ಕೆ ನಿನಗೆ ಸಂಕೋಚವೇನೂ ಇಲ್ಲವಷ್ಟೇ?

ಮಧು—ಹಾಸ್ಯಮಾಡುವೆಯಾ, ಸರೋಜ? ನಾನು ಸಂಕೋಚಪಟ್ಟುದಾವಾಗ?

ಸರೋಜ—ನಿನ್ನ ಮನದಲ್ಲಿ ಕಳವಳವೇನೂ ಇಲ್ಲವಷ್ಟೇ?

ಮಧು—ಈ ನಿರ್ದುಷ್ಟವಾದ ಬ್ರಹ್ಮಾನಂದದಲ್ಲಿ ವಿಕಲ್ಪಕ್ಕೆ ಏನೂ ಕಾರಣವಿಲ್ಲ

ಸರೋಜ—ಬ್ರಹ್ಮಾನಂದಕ್ಕೆ ಕಾರಣವೇನು!

ಮಧು—ನಿನ್ನ ಸಾನ್ನಿಧ್ಯವೇ ಕಾರಣ.

ಸರೋಜ—ಈ ಪ್ರತಿಕ್ಷಣ ವಿಲಕ್ಷಣವಾದ ವ್ಯವಹಾರದಿಂದ ಮನವು ಸಮಾಧಾನದಲ್ಲಿರುವುದೇ?

ಮಧು—ಅದು ಹೇಗೆ ಇರಬಲ್ಲುದು?

ಸರೋಜ—ಈ ಗೃಹವು ಆರದಾಗಿರಬಹುದೆಂದು ನಿನ್ನ ಭಾವನೆ?

ಮಧು—ನಾನು ಇದನ್ನು ಕುರಿತು ಚಿಂತಿಸುವಷ್ಟು ಸಾಹಸಪರನಾಗಿಲ್ಲ.

ಸರೋಜ—ಒಂದು ಬಗೆಯಾಗಿ ಆಲೋಚಿಸಿ ನೋಡಿದಲ್ಲಿ, ಇದು ನನ್ನ ಮನೆಯಲ್ಲ ನಾವು ಇಲ್ಲಿ ಅತಿಕ್ರಮ ಪ್ರವೇಶ ಮಾಡಿರುವೆವು.

ಮಧು—ಹಾಗಾದರೆ ನಾವು ಅತಿಕ್ರಮ ಪ್ರವೇಶಿಗಳೇ?

ಸರೋಜ—ನಮ್ಮದಾದರೋ ಅನಧಿಕಾರದಲ್ಲಿ ಅಧಿಕಾರವು.

ಇದನ್ನು ಕೇಳಿ ಮಧುಮಾಧವನು ಆವ ಮಾತನ್ನೂ ಆಡದೆ ಸುಮ್ಮನಿರಲು, ಸರೋಜಸುಂದರಿಯು—ಮಹಾಶಯ ! ಈ ರಹಸ್ಯವನ್ನಾದರೂ ಕೇಳು, ಎಂದು ನುಡಿದಳು ಮಧುಮಾಧವನು, ಕೇಳುವುದಕ್ಕೆ ತಾನು ಸಿದ್ಧನಾಗಿಯೇ ಇರುವನೆಂದು ಹೇಳಿದ ಮೇಲೆ ಸರೋಜಸುಂದರಿಯು ಹೇಳುವುದಕ್ಕೆ ಮೊದಲು ಮಾಡಿದಳು .—

"ಈ ಮನೆಯ ಯಜಮಾನನು ವಿದ್ಯಾನಗರದಲ್ಲಿರುವನು. ಈ ಮಾದಿಯೆಂಬ ದಾಸಿಯು ಮೊದಲಿನಿಂದಲೂ ನಂಬುಗೆಗೆ ತಕ್ಕವಳಾಗಿದ್ದುದರಿಂದ, ಆತನು ಈ ಮನೆಯನ್ನು ಈಕೆಯ ಸ್ವಾಧೀನದಲ್ಲಿ ಬಿಟ್ಟುಕೊಟ್ಟು ಹೋಗಿರುವನು ಈಕೆಗೆ ಒಬ್ಬ ಮಗಳೂ ಅಳಿಯನೂ ಇರುವರು ಅವರು ಇಲ್ಲಿಗೆ ಸಮೀಪವಾಗಿಯೇ ವಾಸಮಾಡಿಕೊಂಡಿರುವರು. ಮಾದಿಯ ವಂಶದವರು ನಮ್ಮ ವಂಶದವರಿಗೆ ಸ್ವಾಮಿಭೃತ್ಯನ್ಯಾಯದಿಂದ ಬದ್ಧರಾಗಿರುವರು ಈಕೆಗೆ ನನ್ನಲ್ಲಿ ತುಂಬಾ ವಿಶ್ವಾಸವು. ಈ ವಿಶ್ವಾಸದ ಆಧಾರದ ಮೇಲೆಯೇ ನಾನು

ಇಷ್ಟು ಸ್ವಾತಂತ್ರ್ಯವನ್ನು ವಹಿಸಿಕೊಂಡು ಇಲ್ಲಿಗೆ ಬಂದುದು, ಈ ಸ್ಥಲದಲ್ಲಿ ನೀನು ನಿರ್ಭಯನಾಗಿರಬಹುದು. ನಿನ್ನ ಹಣದ ಗಂಟಿಗೆ ಇಲ್ಲಿ ಆವ ಲೋಪವೂ ಉಂಟಾಗಲಾರದು. ನೀನು ನಿರಪರಾಧಿಯೆಂದು ಸಿದ್ಧಾಂತವಾಗುವ ವರೆಗೂ ನೀನು ಗೋಪ್ಯವಾಗಿ ಇಲ್ಲಿಯೇ ವಾಸಮಾಡಿಕೊಂಡಿರು ನಿನ್ನ ನಿರಪರಾಧಿತ್ವವು ಇಷ್ಟರಲ್ಲಿಯೇ ಇತ್ಯರ್ಥವಾಗುವ ಸಂಭವವುಂಟು. ಪರಂತಪ ಮಹಾಶಯನು ನಿನ್ನ ವಿಷಯದಲ್ಲಿ ಮರುಕಗೊಂಡು ನಿನಗಾಗಿ ನಿಸ್ವಾರ್ಥತೆಯಿಂದ ಕೆಲಸಮಾಡುತ್ತಿರುವನು. ಆತನ ಬುದ್ಧಿಶಕ್ತಿಯೂ, ಕಲಾಕೌಶಲ್ಯವೂ, ಕಾರ್ಯದಕ್ಷತೆಯೂ ಅನನ್ಯ ಸಾಮಾನ್ಯವಾದುದು.''

ಸರೋಜಸುಂದರಿಯಾಡಿದ ಮಾತನ್ನು ಕೇಳಿ ಮಧುಮಾಧವನು—ಸರೋಜ! ಇಂತಹ ಮಹೋಪಕಾರವನ್ನೆಸಗಿರುವ ನಿನ್ನನ್ನು ನಾನು ಹುಡುಗಿಯೆಂದು ಭಾವಿಸಿ 'ಸರೋಜ, ಸರೋಜ' ಎಂದು ಅನೇಕ ವೇಳೆಗಳಲ್ಲಿ ಕರೆದಿರುವೆನು. ಇದು ನನ್ನ ಮಹಾಪರಾಧವು. ಇದನ್ನು ನೀನು ಕ್ಷಮಿಸುವುದಾದರೆ, ಇನ್ನು ಮುಂದೆ ನಾನು ನಿನ್ನನ್ನು 'ದೇವಿ' ಎಂದು ಕರೆಯುವೆನು, ಎಂದನು.

ಸರೋಜ—ನಿನ್ನನ್ನು ಕ್ಷಮಿಸುವುದಕ್ಕೆ ನಾನಾರು? ನಾನೆಂದಿಗೂ ಕ್ಷಮಿಸೆನು.

ಮಧು—ಸರೋಜ, ನನ್ನ ಹೃದಯಾಧಿದೇವತೆಯಾದ ಸರೋಜ! ನಿನ್ನ ನಡೆನುಡಿಗಳು ಬಲು ಗಂಭೀರವಾದುವು. ನಾನು ಈ ತತ್ತ್ವವನ್ನರಿತು ಸಂತೋಷಿಸುವಂತೆ ಮಾಡಬಾರದೇ? ನೀನಾದರೊ ನನಗೆ "ಕನ್ನಡಿಯೊಳಗಣ ಗಂಟನಂತೆ" ಆಸೆಯನ್ನು ತೋರುತ್ತಿರುವೆ. ಇದರಿಂದ ನಾನು ಇದ್ದವನೂ ಅಲ್ಲ, ಸತ್ತವನೂ

ಲ್ಲ. ನನಗೆ ಈ ರೀತಿಯಾಗಿ ದುಃಖವನ್ನುಂಟುಮಾಡುವುದು ನಗೆ ತರವೇ?

ಸರೋಜ—ಮಹಾಶಯ! ಸಾಮಾನ್ಯೆಯಾದ ಹೆಂಗುಸಿ ಲ್ಲಿ ರಹಸ್ಯ ತಾನೇ ಏನಿದ್ದೀತು? ಇದಕ್ಕಾಗಿ ನೀನು ಇಷ್ಟು ತಹ ಹ ಪಡಬಹುದೇ?

ಮಧು—ನನಗೆ ನೀನು ಎಲ್ಲವನ್ನೂ ಬಿಚ್ಚಿ ಹೇಳುವ ರೆಗೂ ಸಂಶಯವು ಪರಿಹಾರವಾಗಲಾರದು.

ಸರೋಜ—ನನ್ನ ಪೂರ್ವವೃತ್ತಾಂತವನ್ನು ನೀನು ಕೇಳು ದಕ್ಕೆ ಇಷ್ಟು ತವಕಗೊಂಡಿರುವೆಯಾ?

ಮಧು—ಅಹುದು

ಸರೋಜ—ಹಾಗಾದರೆ ತಿಳಿಸುವೆನು.

ಮಧು—ಆವಾಗ?

ಸರೋಜ—ಬೇಕಾದರೆ ಈಗಳೇ.

ಮಧು—ಬೇಕಾಗಿರುವುದರಿಂದ ಈಗಳೇ ಎಲ್ಲವನ್ನೂ ುಚ್ಚು ಮರೆಯಿಲ್ಲದೆ ತಿಳಿಸಿಬಿಡು.

ಸರೋಜ—ಅಪ್ಪಣೆ.

“ನಾನು ಜಗತ್ಪ್ರಸಿದ್ಧನಾದ ಒಬ್ಬ ಪತ್ತೇದಾರನ ಮಗಳು. ನ್ನ ತಾಯಿಯು ನನ್ನ ಬಾಲ್ಯದಲ್ಲಿಯೇ ಸ್ವರ್ಗವಾಸಿನಿಯಾದುದ ಂದ ನನ್ನ ತಂದೆಯು ನನ್ನನ್ನು ತನ್ನ ಜತೆಯಲ್ಲಿಯೇ ಇಟ್ಟುಕೊಂಡು

ಪತ್ತೇದಾರಿಯ ಕೆಲಸವನ್ನು ನಿರ್ವಂಚನೆಯಿಂದ ಕಲಿಸಿಕೊಟ್ಟನು. ನಾನು ಆತನಿಗೆ ಒತ್ತಾಸೆಯಾಗಿರಬೇಕೆಂಬುದೇ ಆತನ ಪರಮೋದ್ದೇಶವಾಗಿದ್ದಿತು ನನ್ನ ತಂದೆಯು ಸರಕಾರದ ಸೂತ್ರಸ್ಥಾನ (ಪತ್ತೇದಾರರ ಪ್ರಧಾನಾಧಿಕರಣ)ದಲ್ಲಿ ಒಂದು ಗಣ್ಯವಾದ ಅಧಿಕಾರವನ್ನು ಪಡೆದುಕೊಂಡಿದ್ದನು ಆಗ ಬಲು ಸಮರ್ಥರಾದ ಕೆಲವು ಮಂದಿ ಕಳ್ಳರು ಟಂಕಸಾಲೆಯನ್ನು ಗೋಪ್ಯವಾಗಿ ಏರ್ಪಡಿಸಿಕೊಂಡು ಬೇಕಾದ ಹಾಗೆ ಹಣಕಾಸುಗಳನ್ನು ನಿರ್ಮಾಣಮಾಡಿಕೊಂಡು ವ್ಯವಹರಿಸುತ್ತಿದ್ದರು. ಇದು ಹೇಗೋ ಸರಕಾರಕ್ಕೆ ಗೊತ್ತಾಗಿ ಅವರನ್ನು ಪತ್ತೇಮಾಡಿ ದಂಡಿಸುವುದಕ್ಕೋಸ್ಕರ ಅವರು ನನ್ನ ತಂದೆಯನ್ನು ಆ ಗುರುತರವಾದ ಕಾರ್ಯದಲ್ಲಿ ನಿಯಮಿಸಿದರು. ನನ್ನ ತಂದೆಯು ನನ್ನನ್ನೂ ತನ್ನ ಕೆಲಸದಲ್ಲಿ ಒತ್ತಾಸೆಯಾಗಿಟ್ಟುಕೊಂಡು ಕಳ್ಳರನ್ನು ಪತ್ತೆಮಾಡಿದನು. ಬಳಿಕ ಆ ಕಳ್ಳರಲ್ಲಿ ಇಬ್ಬರು ಬಂದಿಗಳಾದರು. ನನಗೂ ದೈವಯೋಗದಿಂದ ಆಗಳೇ ಕಾರಾಗೃಹಪ್ರಾಪ್ತಿಯಾಯಿತು ಇದು ನನ್ನ ತಂದೆಗೂ ಆತನ ಸ್ನೇಹಿತನಿಗೂ ಗೊತ್ತಿದ್ದರೂ ಸುಮ್ಮನೇ ಇದ್ದು ಬಿಟ್ಟರು ಕಾರಣವೇನೆಂದರೆ—ನಾನು ಅಪರಾಧಿನಿಯಲ್ಲವೆಂದೂ, ಗೂಢಚಾರಿಯಾಗಿ ಅಲ್ಲಿಗೆ ಹೋಗಿರುವೆನೆಂದೂ ಅವರು ಚೆನ್ನಾಗಿಯೂ ತಿಳಿದಿದ್ದರು.

ಕಾಲಕರ್ಮಸಂಯೋಗದಿಂದ, ನನ್ನ ತಂದೆಯು ಕಳ್ಳರೊಡನೆ ಹೋರಾಡಿ ಮಡಿದನೆಂದೂ, ಆತನ ಸ್ನೇಹಿತನು ಓಡಿಹೋದನೆಂದೂ ನನಗೆ ತಿಳಿದು ಬಂದಿತು ಅಪರಾಧಿಗಳನ್ನು ಹಿಡಿದುಕೊಟ್ಟುದಕ್ಕಾಗಿ ಕಳ್ಳರು ನನ್ನ ತಂದೆಯನ್ನು ಕೊಂದಿರಬೇಕು. ನನ್ನ ತಂದೆಯು ಮೃತನಾದನೆಂದು ಕೇಳಿದ ಕೂಡಲೆ, ನಾನು ತಬ್ಬಲಿ

ಯಾಗಿಬಿಟ್ಟೆನು ಬಂದಿಯಾಗಿ ಬಿದ್ದಿದ್ದ ನನ್ನನ್ನು ಉದ್ಧಾರ ಮಾಡುವುದಕ್ಕಾಗಿ ಆರೂ ನನಗೆ ದೊರೆಯದೇ ಹೋದರು. ಸರಕಾರದ ಅಧಿಕಾರಿಗಳು ತಮ್ಮ ಅಲ್ಪಜ್ಞತಾದೋಷದಿಂದ, ತಪ್ಪು ಮಾಡಿದವರನ್ನು ಬಿಟ್ಟುಬಿಟ್ಟು ಅತಿಮಾತ್ರವಾದ ಹೋಲಿಕೆಯಿದ್ದುದರಿಂದ ನನ್ನನ್ನೇ ಹಿಡಿದು ಬಂದಿಯನ್ನಾಗಿ ಮಾಡಿಬಿಟ್ಟರು. ಇದು ಸರಿಯಾದ ಮಾರ್ಗವಲ್ಲವೆಂದು ನನ್ನ ಪಕ್ಷವನ್ನು ಅವಲಂಬಿಸಿ ವಾದಿಸುವರಾರು? ಆಗ ನನಗಾರೂ ದಿಕ್ಕಿಲ್ಲದೇ ಹೋಯಿತು ಆಗೆ ನಾನು ತಪ್ಪಿಸಿಕೊಳ್ಳದೇ ಅಲ್ಲಿಯೇ ಇದ್ದಿದ್ದರೆ, ನಾನು ತಪ್ಪಿಗೊಪ್ಪಿಕೊಂಡು ಕಡುವಾಡಿಗೀಡಾಗಬೇಕಾಗಿದ್ದಿತು. ಆದುದರಿಂದ ನಾನು ಕಾರಾಗಾರದಿಂದ ಪಾರಾಗಿ ನಿಜವಾದ ಅಪರಾಧಿನಿಯನ್ನು ಕಂಡು ಹಿಡಿಯುವ ಪ್ರಯತ್ನದಲ್ಲಿ ತೊಡಗಿದೆನು ''

ಇದನ್ನು ಕೇಳಿ ಮಧುಮಾಧವನು—ಲೋಕದಲ್ಲಿ ಎಂತಹ ಅಘಟನ ಘಟನಾ ವಿಶೇಷಗಳು ನಡೆಯುವುವು, ಎಂದನು

ಸರೋಜ—ಲೋಕದಲ್ಲಿ ಹೀಗೆಲ್ಲಾ ನಡೆಯುವುದು ಅಸಂಭವವಾದುದೇನೂ ಅಲ್ಲ. ಈಗೆ ನೋಡು , ನನ್ನಂತೆಯೇ ನಿನ್ನ ವಿಷಯವೂ ಆಗಿರುವುದಲ್ಲ !

ಮಧು—ಸರಿ ಸರಿ.

ಸರೋಜ—ನನ್ನ ತಂದೆಯ ಸ್ನೇಹಿತನು ಕಣ್ಮರೆಯಾದನೆಂದು ನಾನು ಮೊದಲು ಕೇಳಿದ್ದೆನು ; ಈಗಣ ಸುದ್ದಿಯಲ್ಲಿ ಕಳ್ಳರು ಆತನನ್ನೂ ಕೊಂದರೆಂದು ತಿಳಿದು ಬಂದಿರುವುದು.

ಮಧು—ಹಾಗೆಯೇ?

ಸರೋಜ—ನನ್ನ ವಿಷಯದಲ್ಲಿ — ಅಪರಾಧಮಾಡಿದ ಹೆಂಗುಸಿಗೂ ನನಗೂ ಬಲು ಹೋಲಿಕೆಯಿರುವುದು. ಅವಳ ಮಕ್ಕಳಲ್ಲಿಯೂ ಇಷ್ಟರ ಮಟ್ಟಿನ ಹೋಲಿಕೆಯಿರಲಾರದೆಂದು ನಾನು ಧೈರ್ಯವಾಗಿಯೂ ಹೇಳ ಬಲ್ಲೆನು. ಈ ಹೊಲಿಕೆಯಿಂದಲೇ ಸರಕಾರದವರು ನನ್ನನ್ನು ನಿರ್ಬಂಧಿಸಿದರು. ಈಗ ನಾನು ನಿಜವಾದ ಅಪರಾಧಿನಿಯನ್ನು ಕಂಡು ಹಿಡಿದಿರುವೆನು.

ಮಧು—ಇದು ನಿನಗೆ ಗೊತ್ತಾದುದಾವಾಗ?

ಸರೋಜ—ಈಚೀಚೆಗೆ ಗೊತ್ತಾಯಿತು. ನಾನು ಆ ಅಪರಾಧಿನಿಯನ್ನು ಪತ್ತೆಮಾಡುವುದಕ್ಕಾಗಿಯೇ ಅಡುಗೊಳಜ್ಜಿಯ ಬಳಿಯಲ್ಲಿ ರೂಪವನ್ನು ಮಾರ್ಪಡಿಸಿಕೊಂಡು ಕೆಲಸಕ್ಕೆ ಸೇರಿಕೊಂಡಿದ್ದುದು.

ಮಧು—ಕಾರ್ಯಸಾಧನೆಯಾಯಿತಷ್ಟೇ?

ಸರೋಜ—ನಾನು ನಿನಗಾಗಿ ಕೆಲಸಮಾಡುವುದಕ್ಕೆ ಮುಂದೆ ಬಂದಾಗ, ಒಂದು ನಿಮಿಷಮಾತ್ರದಲ್ಲಿ ನನ್ನ ಕೆಲಸವೂ ಕೈಗೂಡಿಹೋಯಿತು. ದೈವಾನುಕೂಲ್ಯವಿದ್ದರೆ, ಹೀಗೆಲ್ಲಾ ನಡೆಯುವುದುಂಟು. ಈಗಣ ಪ್ರಯತ್ನಬಲದಿಂದ ನನ್ನ ತಿಳಿವಿಗೆ ಬಂದಿರುವುದರಲ್ಲಿ, ನನ್ನ ತಂದೆಯು ಇನ್ನೂ ಬದುಕಿರುವನು ಎಂಬುದು ಗೊತ್ತಾಗುತ್ತಿರುವುದು. ಇದು ಇನ್ನೂ ಸಿದ್ಧಾಂತಕ್ಕೆ ಬಂದಿಲ್ಲ. ಮೊದಲು ನಿನ್ನ ವಿಷಯವು ಇತ್ಯರ್ಥವಾದಲ್ಲಿ, ಬಳಿಕ ನನ್ನದೂ ಇತ್ಯರ್ಥವಾಗುವುದು.

ಮಧು—ಲೋಕದಲ್ಲಿ ಭ್ರಾಂತಿಯೇ ಜನರನ್ನು ಮರುಳು ಮಾಡಿಬಿಡುವುದು. ಇದರಿಂದಲೇ ನಿರ್ದೋಷಿಗಳು ಕೂಡ ದೋಷಿ

ಗಳಾಗಿ ಹೋಗುವರು. ಈ ಅವಿವೇಕದ ಪ್ರಪಂಚದಲ್ಲಿ ಸಾಕ್ಷಿಗಳು ಹೇಳಿದುದೇ ನಿಜವೆಂದು ನಂಬಿ ಜನರು ಮುಳುಗಿಹೋಗಿರುವರು.

ಸರೋಜ—ಇಂತಹ ಅಸಮಂಜಸವಾದ ಪ್ರಪಂಚ ದಲ್ಲಿದ್ದುಕೊಂಡೇ ನಾವು ಬದುಕಬೇಕಾಗಿರುವುದು ತುಟಿಮೀರಿದ ಹಲ್ಲನ್ನೂ ಅದೊಂದು ಸೌಂದರ್ಯವೆಂದು ನಾವು ಹೇಳಿಕೊಳ್ಳ ದಿದ್ದರೆ, ನಮಗೆ ಸುಖವೆಲ್ಲಿಂದ ತಾನೇ ಬರಬೇಕು? ಹತ್ತೆಂಟು ಜನರು ಹೇಳಿದ ಹಾಗೆಯೇ ಹೇಳಬೇಕು, ನಡೆದ ಹಾಗೆಯೇ ನಡೆಯ ಬೇಕು, ಮಾಡಿದ ಹಾಗೆಯೇ ಮಾಡಬೇಕು ; ಇಲ್ಲವಾದರೆ, ನಮ್ಮ ಬಾಳು ನಾಯ ಬಾಳಿಗಿಂತಲೂ ಕಡೆಯಾಗಿ ಹೋಗುವುದು. ಮಾಡು ವುದೇನು ?

ಮಧು—ಇಂತಹ ಪ್ರಪಂಚದಲ್ಲಿ ನಾನೇ ಅದೃಷ್ಟ ಶಾಲಿಯು.

ಸರೋಜ—ನೀನೇ ಅದೃಷ್ಟಶಾಲಿಯೇ ?

ಮಧು—ಅಹುದು.

ಸರೋಜ—ಅದು ಹೇಗೆ ?

ಮಧು—ನೀನು ನನಗೆ ಮಿತ್ರೆಯಾಗಿರುವುದರಿಂದ.

ಸರೋಜ—ನಾನೊಬ್ಬ ಪತ್ತೇದಾರನ ಮಗಳು. ನಾನು ಆವ ಸಂಪತ್ತಿಗೂ ಉತ್ತರಾಧಿಕಾರಿಣಿಯಲ್ಲ. ನಾನು ಸತ್ಕುಲ ಪ್ರಸೂತೆಯೆಂಬ ಹೆಮ್ಮೆಯೊಂದು ನನ್ನಲ್ಲಿ ಅಪರಿಮಿತವಾಗಿರುವುದು. ನನ್ನ ತಂದೆಯಾದರೋ ಮಾನನೀಯನೂ, ಧೈರ್ಯಶಾಲಿಯೂ,

ಕರ್ತವ್ಯಪರಾಯಣನೂ ಆಗಿದ್ದನು. ತಾಯಿತಂದೆಗಳ ಗುಣಗಳು ಮಕ್ಕಳಲ್ಲಿಯೂ ಸಂಕ್ರಮಿಸುವುವೆಂದು ನೀನು ನಂಬುವುದಾದರೆ, ನನ್ನಲ್ಲಿಯೂ ಆ ಗುಣಗಳಿರುವುವು ನನ್ನ ತಾಯಿಯಿಂದ ನಾನು ಆತ್ಮಾವಲಂಬನೆಯ ವಿಷಯದಲ್ಲಿ ಅನೇಕ ಪಾಠಗಳನ್ನು ಕಲಿತಿರುವೆನು ಇಂತಹ ನನ್ನ ವಿಷಯದಲ್ಲಿ ನೀನು ಹೀಗೆ ಹೇಳುವುದು ನೋಡಿದರೆ ನನಗೆ ನಾಚುಗೆಯಾಗುವುದು.

ಮಧು—ನಿನ್ನ ತಂದೆಯು ಬದುಕಿರಬಹುದೆಂದು ನೀನು ಊಹಿಸಿರುವೆಯಲ್ಲವೇ?

ಸರೋಜ—ಊಹಿಸಿರುವೆನು.

ಮಧು—ನೀನು ಹೇಳಿದ ಮಾತುಗಳೆಲ್ಲವೂ ಸತ್ಯವೆಂಬುದಕ್ಕೆ ಪ್ರಮಾಣ ಮಾಡಬಲ್ಲೆಯಾ?

ಸರೋಜ—ಮಾಡಬೇಕಾದ ಸಮಯ ಬಂದಾಗ ಅದನ್ನೂ ಮಾಡುವೆನು. ಮಧು ಮಹಾಶಯ! ಮತ್ತೊಂದು ವಿಷಯವನ್ನು ತಿಳಿಸಬೇಕೆಂದಿರುವೆನು. ಆ ಇಬ್ಬರು ಪತ್ತೇದಾರರು ನಿನ್ನನ್ನು ಮೊದಲು ದಸ್ತಗಿರಿಮಾಡಿದಾಗ, ಪರಂತಪನೆಂಬ ಪತ್ತೇದಾರನು ನಿನಗೆ ಉಪಕಾರಮಾಡುವುದಾಗಿ ನೀನು ನನಗೆ ತಿಳಿಸಿದೆಯಷ್ಟೇ? ಬಳಿಕ ನಾನು ಆತನನ್ನು ನೋಡುವುದಕ್ಕಾಗಿ ಹೋದೆನು. ಆತನು ಅವಗುಂಠನವತಿಯಾದ ನನ್ನನ್ನು ನೋಡಿ—ಮುಸುಕನ್ನು ತೆಗೆದು ಮಾತನಾಡು, ಎಂದನು. ನಾನು ಮುಸುಕನ್ನು ತೆಗೆದಕೂಡಲೆ, ಆತನು ನನ್ನನ್ನು ನೋಡಿ ಬೆರಗಾಗಿ—ನಿನ್ನ ಹೆಸರೇನು, ತಾಯೆ? ಎಂದು ಪ್ರಶ್ನೆಮಾಡಿದನು.

ನಾನು—ನನ್ನ ಹೆಸರು ಸರೋಜಸುಂದರಿ.

ಪರಂತಪ—ಏನು! ಸರೋಜಸುಂದರಿಯೇ?

ನಾನು—ಅಹುದು, ಮಹಾಶಯ!

ಪರಂ—ನನ್ನ ಪರಮ ಮಿತ್ರನಾದ, ಜಂಝಾಮಾರುತನೆಂಬ ಬಿರುದಾಂಕಿತನಾದ ವೀರವಿಕ್ರಮರಾಯನ ಮಗಳು ನೀನೇ ಅಲ್ಲವೇ?

ನಾನು—ಆತನೇ ನನ್ನ ತಂದೆಯು.

ಪರಂ—ಸರೋಜ! ನಿನ್ನ ತಂದೆಯೇ ನನಗೆ ಎಲ್ಲಾ ವಿಷಯದಲ್ಲಿಯೂ ಮಾರ್ಗದರ್ಶಿಯಾಗಿದ್ದನು. ಆತನನ್ನು ಬಿಟ್ಟು ನಾನು ಒಂದು ದಿನವಾದರೂ ಅಗಲಿದ್ದವನಲ್ಲ ಆತನ ಸಲಹೆಗಳಿಂದಲೇ ನಾನು ಇಂದಿನ ವರೆಗೂ ಬದುಕಿರುವುದು ಆತನನ್ನು ನಾನು ಮಿತ್ರನೆಂದು ಕರೆಯುವುದಕ್ಕಿಂತಲೂ, ಗುರುವೆಂದು ಕರೆವುದು ನನಗೆ ಶ್ರೇಯಸ್ಕರವು.

ಪರಂತಪನು ಹೀಗೆ ಹೇಳಿ ಹರ್ಷಶೋಕಪರವಶನಾಗಿ, ನನ್ನನ್ನು ಒಂದಾಸನದ ಮೇಲೆ ಕುಳ್ಳಿರಿಸಿ, ನನ್ನ ವೃತ್ತಾಂತವೆಲ್ಲವನ್ನೂ ಕೇಳಿದನು. ನಾನು ನಿನಗೆ ಹೇಳಿದ ಹಾಗೆಯೇ ಆತನಿಗೂ ನನ್ನ ವೃತ್ತಾಂತವೆಲ್ಲವನ್ನೂ ತಿಳಿಯಪಡಿಸಿದೆನು

ಪರಂತಪನು ಇದೆಲ್ಲವನ್ನೂ ಕೇಳಿದ ಬಳಿಕ ಇಂತೆಂದನು.—

"ಸರೋಜ! ಒಂದು ವಿಷಯವನ್ನು ನಿನಗೆ ತಿಳಿಸಬೇಕೆಂದಿರುವೆನು. ಆದರೆ ನೀನು ಅದನ್ನೇ ನಿಜವೆಂದು ನಂಬಿ ಹಿಗ್ಗ

ಬಾರದು. ನಿನ್ನ ತಂದೆಯ ವಿಚಾರವೆಲ್ಲವೂ ನಿನಗೆ ಚೆನ್ನಾಗಿಯೂ ಗೊತ್ತೇ ಇರಬೇಕು. ಆತನು ಕಳ್ಳರ ಕೈಗೆ ಸಿಲುಕಿ ಮಡಿದನೆಂದು ಅದೊಂದು ಸುದ್ದಿಯಿದ್ದಿದ್ದಿತು. ಆದರೆ ಆತನ ಮಿತ್ರನೊಬ್ಬನು ಮಡಿದನೆಂದೂ ನಿನ್ನ ತಂದೆಯು ಇನ್ನೂ ಕಳ್ಳರ ವಶದಲ್ಲಿ ಬಂದಿಯಾಗಿರುವನೆಂದೂ ಮತ್ತೊಂದು ಸುದ್ದಿಯಿದ್ದಿರುವುದು. ಈಗಣ ಸುದ್ದಿಯು ನಿಜವಿರಬಹುದೆಂಬುದಕ್ಕೆ ನನಗೆ ಅನೇಕ ಕಾರಣಗಳು ಒದಗಿಬರುತ್ತಿರುವುವು. ನನ್ನ ಮಿತ್ರರಲ್ಲಿ ಅನೇಕರು ಆತನನ್ನು ಪತ್ತೇ ಮಾಡುವುದಕ್ಕಾಗಿ ಎಲ್ಲೆಲ್ಲಿಯೋ ತೆರಳಿರುವರು ಇಷ್ಟರಲ್ಲಿಯೇ ಅದರ ನಿಜಾಂಶವು ಗೊತ್ತಾಗಬಹುದು

ಸರೋಜ! ಈಗ ನೀನು ನನ್ನನ್ನು ಹುಡುಕಿಕೊಂಡು ಬರಲು ಕಾರಣವೇನು? ನಿನ್ನ ತಂದೆಯ ವಿಷಯವೇನಾದರೂ ಹೊರಬಿದ್ದಿರುವುದೇ? ಅದನ್ನು ಕೇಳುವುದರಲ್ಲಿ ನನಗೆ ತುಂಬಾ ಕುತೂಹಲವಿರುವುದು.''

ನಾನು ಪರಂತಪನ ಮಾತನ್ನು ಕೇಳಿ ಹರ್ಷವಿಷಾದಗಳನ್ನು ಏಕಕಾಲದಲ್ಲಿಯೇ ಹೊದ್ದಿದವಳಾಗಿ ತಂದೆಯ ವಿಷಯವಾಗಿ ಆವ ಮಾತನ್ನೂ ಆಡದೆ, ನಿನ್ನ ವಿಷಯವಾಗಿ ಮಾತನಾಡಿದೆನು.

ಮಧು—ಆತನ ಅಭಿಪ್ರಾಯವೇನು?

ಸರೋಜ—ಆತನು ನಿನ್ನ ನಿರಪರಾಧಿತ್ವವನ್ನು ಸಾಧಿಸುವುದರಲ್ಲಿ ಬದ್ಧಕಂಕಣನಾಗಿ ನಿಂತಿರುವನು. ಅದಕ್ಕೆ ಸಹಕಾರಿಯಾದ ಅನೇಕ ವಿಷಯಗಳನ್ನೂ ನಾನು ಆತನಿಗೆ ತಿಳಿಸಿದೆನು. ಅದನ್ನು ಕೇಳಿದ ಕೂಡಲೆ, ಆತನು ಮತ್ತಷ್ಟು ಧೈರ್ಯದಿಂದ

'ಇನ್ನು ನನ್ನ ಮಾರ್ಗವೆಲ್ಲವೂ ಸುಗಮವಾಗಿಯೇ ಇರುವುದು' ಎಂದು ನನಗೆ ಧೈರ್ಯವನ್ನು ಅಡಿಗಡಿಗೂ ಉಂಟುಮಾಡಿದನು.

ಮಧು—ಸರೋಜ! ನಾನು ನಿನಗೆ ಇಂದಿನಿಂದ ಅಕ್ರೀತ ದಾಸನಾಗಿರುವೆನು.

ಸರೋಜ—ಮಧುಮಾಧವ ಮಹಾಶಯ! ನಾನು ಈ ವಿಷಯದಲ್ಲಿ ಇನ್ನೂ ಚೆನ್ನಾಗಿ ಪರ್ಯಾಲೋಚಿಸಿ ಉತ್ತರ ಕೊಡುವ ತನಕ, ನೀನು ನಿನ್ನ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಬಹುದು.

ಮಧು—ಶತ್ರುಗಳು ನಿನ್ನ ಬೆನ್ನಂಟಿರುವರೆನು?

ಸರೋಜ—ಅದರಲ್ಲಿ ಸಂಶಯವೇನು?

ಮಧು—ಅವರಾರಿರಬಹುದು?

ಸರೋಜ—ನನ್ನ ತಂದೆಯು ಆವ ಅಪರಾಧಿಗಳನ್ನು ಶಿಕ್ಷೆಗೆ ಗುರಿಮಾಡಿದನೋ, ಅವರ ಸ್ನೇಹಿತರು ನನ್ನ ಹೆಗಲೇರಿರುವರು. ನಾನು ಬಲು ಎಚ್ಚರಿಕೆಯಿಂದ ಐದು ತಿಂಗಳಿಂದಲೂ ಅವರ ಕಣ್ಣಿಗೆ ಮಣ್ಣು ತೂರುತ್ತಿರುವೆನು.

ಮಧು—ನಮ್ಮಿಬ್ಬರ ದುರವಸ್ಥೆಯೂ ಒಂದೇ ಆಗಿರುವುದು. ಇಂತಹ ನಾವಿಬ್ಬರೂ ಒಟ್ಟಿಗೆ ಸೇರಿದುದೇ ದೈವಯೋಗವು. ನನ್ನ ಪೂರ್ವವೃತ್ತಾಂತವು ಇನ್ನೂ ಸಶೇಷವಾಗಿಯೇ ಇರುವುದು. ಅದನ್ನು ತಿಳಿಸದೆಯೇ ನನ್ನ ಮನವು ಶಾಂತವಾಗಲೊಲ್ಲದು. ನಿನಗೆ ಅದನ್ನು ಕೇಳುವುದಕ್ಕೆ ಅವಕಾಶವೂ ಕುತೂಹಲವೂ ಇರುವುದಾದರೆ, ನಾನು ಈಗಳೇ ತಿಳಿಸುವೆನು.

ಸರೋಜ—ಈಗಳೇ ತಿಳಿಸು, ನಾನು ಅದನ್ನು ಆದ
ದಿಂದ ಕೇಳುವೆನು.

ಮಧುಮಾಧವನು ಹೇಳತೊಡಗಿದನು :—

" ಪಶ್ಚಿಮೋತ್ತರದೇಶದಲ್ಲಿ ನನ್ನ ತಂದೆಯು ವ್ಯಾಪಾರದಿಂ
ಜೀವನ ಮಾಡಿಕೊಂಡಿರುತಿದ್ದನು ಆತನ ವ್ಯಾಪಾರವು ದಿನದಿನ
ಅಭಿವೃದ್ಧಿಯಲ್ಲಿಯೇ ಇರುತ್ತಿದ್ದಿತು. ನನ್ನ ತಾಯಿಯು ನನ
ಒಂದು ತಿಂಗಳಾಗುವದರೊಳಗಾಗಿ ಸ್ವಾಮಿ ಪಾದಾರವಿಂದವ
ಸೇರಿಬಿಟ್ಟಳು. ನಮ್ಮೂರಿನಲ್ಲಿ ದರೋಡೆಗಳ್ಳರು ಗುಂಪುಕ
ದಾರಿಹೋಕರನ್ನು ಸುಲಿಯುತ್ತಲೂ, ಹೆಂಗುಸರನ್ನು ಅಪಹರಿ
ಕೊಂಡು ಹೋಗುತ್ತಲೂ, ಮನೆಗಳಿಗೆ ಕನ್ನಹಾಕಿ ಕೈಗೆ ಸಿಕ್ಕ
ದನ್ನು ಹೊತ್ತುಕೊಂಡು ಹೋಗುತ್ತಲೂ ಜನರ ನೆಮ್ಮದಿಗೆ ಭಂ
ವನ್ನುಂಟುಮಾಡುತ್ತಿದ್ದರು. ನನ್ನ ತಂದೆಯ ಸಲಹೆಯ ಮೇ
ಆವೂರಿನವರೆಲ್ಲರೂ ಒಟ್ಟಾಗಿ ಸೇರಿ ಕಳ್ಳರನ್ನು ಬೆನ್ನಟ್ಟಿ ಕೆಲವರನ
ಕೊಂದು, ಕೆಲವರನ್ನು ಕೈಸೆರೆ ಹಿಡಿದು, ಮತ್ತೆ ಕೆಲವರಿಗೆ ಚಿ
ಹಿಂಸೆಯನ್ನು ಮಾಡಿ ಬಂದರು. ಆ ಕಳ್ಳರ ಸ್ನೇಹಿತರು ಇದೆ
ದಕ್ಕೂ ನನ್ನ ತಂದೆಯೇ ಕಾರಣವೆಂದು ತಿಳಿದು ನನ್ನ ತಂದೆಯನ
ಹೊತ್ತುಕೊಂಡು ಹೊರಟುಹೋದರು. ಇಂದಿನ ವರೆಗೂ ಆತ
ಸುದ್ದಿಯೇ ಹೋರಬಿದ್ದಿಲ್ಲ. ಆದುದರಿಂದ ನನ್ನ ತಂದೆಯು ಸತ
ಹೋಗಿರಬೇಕೆಂದು ನನ್ನ ನಂಬುಗೆಯು, ಆದರೆ ನನ್ನ ಅಭಿಪ್ರಾಯ
ಸಾಕಾದಷ್ಟು ಪ್ರಮಾಣಗಳೇನೂ ದೊರೆತಿಲ್ಲ.

ನನ್ನ ಆರನೆಯ ವಯಸ್ಸಿನಲ್ಲಿ ನನ್ನ ತಂದೆಯ ಸ್ನೇಹಿ
ನೊಬ್ಬನು ನನ್ನನ್ನು ಕರೆದುಕೊಂಡು ಹೋದನು. ನಾನು ದೊಡ್ಡ

ನಾಗುತ್ತಾ ಬಂದಹಾಗೆಲ್ಲಾ ನನಗೊಬ್ಬ ಗೂಢಶತ್ರುವಿರುವುದಾಗಿ ತಿಳಿಯ ಬಂದಿತು. ನನಗೆ ಹನ್ನೆರಡನೆಯ ವರ್ಷವು ತುಂಬುತ್ತಿರುವಾಗ, ನನ್ನ ತಂದೆಯ ಸ್ನೇಹಿತನು ಕಾಲಾಧೀನನಾಗಿಬಿಟ್ಟನು. ಅಂದು ಮೊದಲು ನಾನು ಪ್ರಪಂಚವೆಂಬ ನಾಟಕರಂಗದಲ್ಲಿ ತೋರಿಬಂದ ಪಾತ್ರಗಳನ್ನು ವಹಿಸಿ ಅಭಿನಯಿಸಲಾರಂಭಿಸಿದೆನು. ನನ್ನ ಗೂಢ ಶತ್ರುವಾವರೋ ಕಳ್ಳರಲ್ಲಿ ಒಬ್ಬನಾಗಿರಬೇಕು, ಇಲ್ಲವೇ ಕಳ್ಳರ ಸ್ನೇಹಿತನಾಗಿರಬೇಕು, ಇಲ್ಲವೇ, ಸತ್ತ ಕಳ್ಳರ ದೇಹಾನುಬಂಧಿಯಾಗಿರಬೇಕು. ನನ್ನ ಗೂಢ ಶತ್ರುವು ಹೆಂಗುನಾಗಿರಬಹುದೆಂದು ನನಗೆ ಒಂದೊಂದು ವೇಳೆ ತಲೆಗೆ ಹೊಳೆಯುವುದು, ಆದರೆ ಅದಕ್ಕೆ ಪ್ರಮಾಣವೇನೂ ನನ್ನ ಬಳಿಯಲ್ಲಿಲ್ಲ.''

ಸರೋಜ—ಮಧು ಮಹಾಶಯ! ನಿನ್ನ ಊಹೆಯೂ ಸರಿಯಾದುದೆಂದೇ ನನಗೆ ತೋರುತ್ತಿರುವುದು. ನಾನೂ ನಿನ್ನ ಗೂಢ ಶತ್ರುವನ್ನು ಹೆಂಗುಸೆಂದೇ ತಿಳಿದು ಆಕೆಯ ಬೆನ್ನಟ್ಟಿರುವೆನು ಇಷ್ಟರಲ್ಲಿಯೇ ಆಕೆಯೂ ಪತ್ತೆಯಾಗುವಳು

ಮಧು—ಸರೋಜ! ನೀನೇ ನನ್ನ ಪರದೇವತೆ.

ಸರೋಜ—ಕೇಳು, ಮಹಾಶಯ! ನಾನು ಪರಂತಪ ನನ್ನು ನೋಡಿದ ಬಳಿಕ ನಿನ್ನನ್ನು ನೋಡುವುದಕ್ಕಾಗಿ ಕಾರಾಗೃಹದ ಕಡೆಗೆ ತೆರಳಿದೆನು. ಆಗ ಒಬ್ಬ ಅವಗುಂಠನವತಿಯಾದ ಹೆಂಗುಸು ನನ್ನನ್ನು ಅನುಸರಿಸಿಕೊಂಡು ಬಂದಳು. ನಾನು ಪತ್ತೇದಾರನ ಮಗಳಾಗಿ ಪತ್ತೇದಾರಿಯ ಕೆಲಸವನ್ನು ಅರಿತುಕೊಂಡಿದ್ದುದರಿಂದ ನನಗೆ ಸಂಶಯ ತೋರಿಬಂದು ಆಕೆಯಾರಿರಬಹುದೆಂಬುದನ್ನು ಅರಿವುದಕ್ಕಾಗಿ ನಾನು ಕಾರಾಗೃಹದ ದಾರಿಯನ್ನೇ ಬಿಟ್ಟು ಬೇರೊಂದು

ಕಡೆಗೆ ತಿರುಗಿದೆನು. ಆಕೆಯೂ ನನ್ನ ಹಿಂದೆಹಿಂದೆಯೇ ಹೊರಟು ಬರುತ್ತಿದ್ದಳು. ಬಳಿಕ ನಾನು ಅಲ್ಲಿ ಬಿದ್ದು ಇಲ್ಲಿ ಬಿದ್ದು ಕಟ್ಟ ಕಡೆಗೆ ಮತ್ತೆ ಪರಂತಪನಲ್ಲಿಗೆ ಹೋಗಿ ಆತನಿಗೆ ಈ ವಿಚಾರವನ್ನ ರುಹಿ ರೂಪಾಂತರದಿಂದ ಹೊರಹೊರಟೆನು. ನನಗೆ ಸಂಶಯ ತೋರಿಬಂದುದರಿಂದಲೂ, ಪರಂತಪ ಮಹಾಶಯನೂ ಇದೇ ಅಭಿಪ್ರಾಯಪಟ್ಟುದರಿಂದಲೂ, ಈ ಅವಗುಂಠನವತಿಯೇ ನಿನ್ನ ಗೂಢ ಶತ್ರುವೆಂದು ನಾನು ನಿರ್ಧರಿಸಿಕೊಂಡೆನು.

ಮಧು—ಆಕೆಯಾರಿರಬಹುದು ?

ಸರೋಜ—ಪರಂತಪನು ಆಕೆಯಾರೆಂಬುದನ್ನು ಹೇಳ ಲಿಲ್ಲ. ನಾನು ಒತ್ತಿಯೊತ್ತಿ ಕೇಳಿದಾಗ, ನಿಜವಾದ ಕಳ್ಳರು ಸಿಕ್ಕಿ ಬಿದ್ದಾಗ, ಈಕೆಯ ವೃತ್ತಾಂತವೂ ಗೊತ್ತಾಗುವುದು, ಎಂದು ಹೇಳಿ ದನು. ಇದನ್ನು ಕೇಳಿ ನಾನು ಸುಮ್ಮನಾಗಿಬಿಟ್ಟೆನು.

ಸರೋಜಸುಂದರಿಯು ಹೀಗೆ ಹೇಳಿ ಮತ್ತೆ ಮಾತನಾಡಿ ದಳು :—

"ಮಧು ಮಹಾಶಯ ! ಪರಂತಪನು ಬಲು ಬುದ್ಧಿ ಮಂತನು. ಆತನು ಹಿಡಿದ ಕೆಲಸವು ಕೆಟ್ಟಿತೆಂದೇ ಕೇಳಿಲ್ಲ ಮರ್ಮವನ್ನು ಉದ್ಘಾಟನೆಮಾಡುವುದರಲ್ಲಿ ಆತನನ್ನು ಬಿಟ್ಟರೆ ಬೇರೊಬ್ಬರಿಲ್ಲ. ಅವನು ಈಗಾಗಲೇ ಅನೇಕ ಪ್ರಮಾಣಗಳನ್ನು ಸಿದ್ಧಪಡಿಸಿಕೊಂಡಿರುವನು. ಇಂದು ನಾಳೆಯೊಳಗಾಗಿ ಎಲ್ಲವೂ ಬಹಿರಂಗಕ್ಕೆ ಬಂದುಬಿಡುವುವು. ಪರಂತಪನ ಮೇಲೆ ಕಾರ್ಯಭಾರ ವನ್ನು ವಹಿಸಿದ ಬಳಿಕ, ನಾವು ನಿಶ್ಚಿಂತರಾಗಿರಬಹುದು. ಆತನು ಕೆಲಸವನ್ನು ಒಪ್ಪಿ ಕುಳಿತನೆಂದರೆ, ನಮ್ಮ ಕೆಲಸವು ಕೈಗೂಡಿತೆಂದೇ

ಸಿದ್ಧಾಂತವು. ಇನ್ನು ನಮ್ಮ ದೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಂತೆ ನಮ್ಮ ಕಾರ್ಯವು ಫಲಿಸುವುದು.

---

## ಒಂಬತ್ತನೆಯ ವಿಲಾಸ

### ಪ್ರೀತಿ ವಿಜಯ

ಸರೋಜಸುಂದರಿಯು ಮಧುಮಾಧವನಿಗೆ ಎಷ್ಟೋ ವಿಷಯಗಳನ್ನು ತಿಳಿಯ ಹೇಳಿದಳು ಅವೆಲ್ಲವನ್ನೂ ಈ ಕ್ಷುದ್ರ ಪ್ರಬಂಧದಲ್ಲಿ ವಿವರಿಸುವುದಕ್ಕೆ ಅವಕಾಶವಿಲ್ಲ. ಇದರ ಮೇಲೂ ಅಪ್ರಕೃತವಾದ ವಿಷಯಗಳಿಂದ ಈ ಗ್ರಂಥವನ್ನು ತುಂಬಿ ದೊಡ್ಡದನ್ನಾಗಿ ಮಾಡಬೇಕೆಂಬ ಅಭಿಲಾಷೆಯೂ ನಮಗಿಲ್ಲ

ಸರೋಜಸುಂದರಿಯು ಮಧುಮಾಧವನಿಗೆ ವರಿವರಿಯಾಗಿ ಚಿಂತಿಸುವುದಕ್ಕೆ ಬೇಕಾದಷ್ಟು ವಿಷಯಗಳನ್ನು ಅವನ ತಲೆಯಲ್ಲಿ ತುಂಬಿದಳು. ಇಷ್ಟೆನ್ನುವುದರೊಳಗಾಗಿ ಪ್ರಾತರ್ಭೋಜನದ ಕಲಾಪಗಳೆಲ್ಲವೂ ನಾಂಗವಾಗಿ ಮುಗಿದು ಹೋದುವು.

ಬಳಿಕ ಇವರಿಬ್ಬರೂ ಹೊರಹೊರಟು ಪರ್ವತ ಪ್ರದೇಶಗಳ ಪ್ರಾಕೃತಿಕಸೌಂದರ್ಯವನ್ನು ನೋಡಿ ಆನಂದಿಸುವುದಕ್ಕಾಗಿ ಕಾಡುಮೇಡುಗಳ ಕಡೆಗೆ ತಿರುಗಿದರು. ಕೆಲವೆಡೆಗಳಲ್ಲಿ ಬಗೆಬಗೆಯ ಪಕ್ಷಿಗಳು ಮೃದುಮಧುರವಾಗಿ ಗಾನಮಾಡಿದುವು; ಕೆಲವೆಡೆಗಳಲ್ಲಿ ನಾನಾವರ್ಣದ ಹೂಗಳು ತಮ್ಮ ಸುವಾಸನೆಗಳನ್ನು ಧಾರಾಳವಾಗಿ ಬೀರಿದುವು; ಕೆಲವೆಡೆಗಳಲ್ಲಿ ಶುಚಿರುಚಿಯಾದ ಪಕ್ವಫಲಗಳು ತೃಪ್ತಿಕರವಾಗಿ ಅತಿಥಿಸತ್ಕಾರವನ್ನೆಸಗಿದುವು ; ಕೆಲವೆಡೆಗಳಲ್ಲಿ

ಮಂದ ಮಾರುತನು ಮಾರ್ಗತಪ್ಪಿ ಬಂದ ಪಥಿಕರಿಗೆ ಆಯಾಸ ಪರಿಹಾರಕ್ಕಾಗಿ ಶೈತ್ಯೋಪಚಾರವನ್ನು ಸಲ್ಲಿಸಿದನು ; ಕೆಲಕೆಲವೆಡೆ ಗಳಲ್ಲಿ ಪ್ರಕೃತಿದೇವಿಯು ತನ್ನ ಭೀಮಕಾಂತವಾದ ಸ್ವರೂಪವನ್ನು ತೋರಿ ದಾರಿಗರಿಗೆ ಮಹಾಭೀತಿಯನ್ನೂ ಪ್ರಶಾಂತಕೆಯನ್ನೂ ಏಕ ಕಾಲದಲ್ಲಿ ಉಂಟುಮಾಡಿಕೊಡುತಿದ್ದಿತು. ಇವರಿಬ್ಬರೂ ಸಂಧ್ಯಾ ಕಾಲದ ವರೆಗೂ ಸರಸಸಲ್ಲಾಪಗಳಿಂದ ಆನಂದ ನಾಗರದಲ್ಲಿ ತೇಲುತ್ತಲೂ ಮುಳುಗುತ್ತಲೂ ಕಾಲವನ್ನು ಒಂದು ನಿಮಿಷದಂತೆ ಕಳೆದು, ದೀಪ ಕಚ್ಚುವ ವೇಳೆಗೆ ಸರಿಯಾಗಿ ಮನೆಗೆ ಬಂದು ತಮ್ಮ ತಮ್ಮ ಸ್ಥಾನಗಳಲ್ಲಿ ಸೇರಿಕೊಂಡರು

ಮಧುಮಾಧವನು ತನ್ನ ಕೋಣೆಗೆ ಬಂದು ವಿಶ್ರಾಂತಿ ಸುಖ ವನ್ನು ಅನುಭವಿಸುವುದಕ್ಕೆಂದು ಕುಳಿತನೋ ಇಲ್ಲವೋ, ಅಷ್ಟರೊಳ ಗಾಗಿ ಗೃಹಾಂಗಣದಲ್ಲಿ ಚಿಟ್ಟೆಂದು ಚೀತ್ಕಾರಧ್ವನಿಯು ಆವರಿಸಿ ಪ್ರತಿಧ್ವನಿತವಾಯಿತು ಇದನ್ನು ಕೇಳಿದ ಕೂಡಲೆ ಮಧುಮಾಧ ವನು ಆ ಸ್ಥಲಕ್ಕೆ ತಟ್ಟನೆ ಹಾರಿಬಂದು ನೋಡಲಾಗಿ ಅವನ ರಕ್ತ ವೆಲ್ಲವೂ ಕುದಿದುಹೋಯಿತು ಅಂಗಣದಲ್ಲಿ ಇಬ್ಬರು ಘಾತುಕರು ಸರೋಜಸುಂದರಿಯನ್ನು ಅಕ್ರಮಣಮಾಡಿ ಹೊತ್ತು ಕೊಂಡು ಹೋಗುವುದರಲ್ಲಿದ್ದರು ಇದನ್ನು ಕಂಡೇ ಮಾದಿಯು ಗಟ್ಟಿಯಾಗಿ ಅರಚಿಕೊಂಡುದು.

ಮಧುಮಾಧವನು ಈ ದೃಶ್ಯವನ್ನು ನೋಡಿ ರೇಗಿ ರೇಗಿ ಬಿದ್ದ ವನಾಗಿ ಒಂದೇ ಹಾರು ಹಾರಿ ಆ ಘಾತುಕರ ಮೇಲೆ ಬಿದ್ದು ಕಣ್ಣು ಮೂಗು ಎಂಬುದನ್ನು ನೋಡದೆ ಫಳೀರೆಂದು ಅಪ್ಪಳಿಸಿದನು. ಒಬ್ಬನು ವಿಲವಿಲನೆ ಒದೆದಾಡಿ ರಕ್ತವನ್ನು ಕಾರುತ್ತಾ ನೆಲದ ಮೇಲೆ ಉರುಳಿಹೋದನು. ಮತ್ತೊಬ್ಬನು ಪಿಸ್ತೂಲಿನಿಂದ ಮಧುವನು

ಹೊಡೆಯುವುದರೊಳಗಾಗಿ, ಮಧುಮಹಾಶಯನು ಆತನ ಕಾಲುಗಳ ನಡುವೆ ನುಗ್ಗಿ ಆತನನ್ನು ತಲೆಕೆಳಗಾಗಿ ಮಾಡಿಬಿಟ್ಟನು. ಆ ಘಾತುಕನು ಚೇತರಿಸಿಕೊಂಡು ಮತ್ತೆ ಏಳುವುದರೊಳಗಾಗಿ, ಮಧುವು ಆತನ ಕಯ್ಯಿಂದ ಪಿಸ್ತೂಲನ್ನು ಕಸಿದುಕೊಂಡು ಅದರ ಹಿಡಿಯಿಂದ ಆತನ ತಲೆಯ ಮೇಲೆ ರಪ್ಪೆಂದು ಬಾರಿಸಿದ್ದನು. ಇಬ್ಬರೂ ಶಕ್ತಿಗುಂದಿ ನೆಲದ ಮೇಲೆ ಬಿದ್ದಿರಲು, ಮಧುಮಾಧವನು ಅವರಿಬ್ಬರನ್ನೂ ಒಂದೇ ಹಗ್ಗದಿಂದ ಒಟ್ಟಿಗೆ ಕಟ್ಟಿಹಾಕಿ, ಅರಚುವುದಕ್ಕೂ ಆಸ್ಪದ ವಿಲ್ಲದಹಾಗೆ ಅವರ ಬಾಯಿಗೆ ಬಟ್ಟೆಯನ್ನು ತುರುಕಿ, ಸರೋಜಸುಂದರಿಯನ್ನು ಬಿಡುಗಡೆ ಮಾಡಿ ಮನೆಯೊಳಗೆ ಕರೆತಂದು ಕುಳ್ಳಿರಿಸಿದನು. ಸರೋಜಸುಂದರಿಯು ವಿಶ್ರಾಂತಿ ಲಾಭವನ್ನು ಪಡೆದುಕೊಂಡ ಬಳಿಕ, ಮಧುಮಾಧವನು ಆಕೆಯನ್ನು ಕುರಿತು—ಸರೋಜ! ಹೀಗಾಗುವುದರ ಅರ್ಥವಾದರೂ ಏನು? ಎಂದು ಕೇಳಿದನು.

ಸರೋಜ—(ನಗುತ್ತಾ) ಮಹಾಶಯ! ನನಗೆ ಪರಮಾನಂದ ವಾಯಿತು.

ಮಧು—(ಬೆರಗಾಗಿ) ಪರಮಾನಂದವೇ! ಹಾಗೆಂದರೇನು ಸರೋಜಸುಂದರಿ?

ಸರೋಜ—(ಹಾಸ್ಯರಸವನ್ನು ಅವಲಂಬಿಸಿ) ಪರಮಾನಂದವೆಂದರೆ ಪರಮಾನಂದ; ಇದಕ್ಕೆ ನಿನಗೆ ಅರ್ಥವಾಗಲಿಲ್ಲವೇ, ಮಹಾಶಯ?

ಮಧು—ಸರೋಜ! ನನ್ನ ಮನವಾದರೋ ಈ ಭಯಂಕರ ದೃಶ್ಯದಿಂದ ತತ್ತರಗುಟ್ಟುತ್ತಿರುವುದು. ಹೀಗಿರುವಲ್ಲಿ ಇದು

ಪರಿಹಾಸ್ಯಕ್ಕೆ ಸಮಯವೆಂದರೇನು? ಅಂಧಕಾರದಲ್ಲಿರುವ ನನಗೆ ಬೆಳಕನ್ನು ತೋರು

ಸರೋಜ—ಮಹಾಶಯ! ಸೂರ್ಯನಿಗೆ ದೀಪೋಪಚಾರವೇ! ನೀನೇ ನನಗೆ ಬೆಳಕನ್ನು ತೋರಿರುವಾಗ, ನಾನು ನಿನಗೆ ಬೆಳಕನ್ನು ತೋರುವುದೆಂದರೇನು? ನೀನು ನನಗೆ ಮಹೋಪಕಾರವನ್ನೇ ಮಾಡಿದೆ ನನ್ನದಕ್ಕಿಂತಲೂ ನಿನ್ನದು ಇಮ್ಮಡಿಸಿ ಹೋಯಿತು. ನಿನಗೆ ನಾನು ಯಾವಜ್ಜೀವವೂ ಕೃತಜ್ಞೆಯಾಗಿರುವೆನು ಈಗ ನೀನು ನನಗೆ ಅಕ್ರೀತದಾಸನೋ, ನಾನೇ ನಿನಗೆ ಅಕ್ರೀತದಾಸಿಯೋ ನೀನೇ ನೋಡಿಕೊಳ್ಳು ನೀನು ಒಳ್ಳೆಯ ಸಮಯದಲ್ಲಿಯೇ ಆ ಇಬ್ಬರು ಮೂರ್ಖರನ್ನು ನಿಗ್ರಹಿಸಿ, ನನ್ನನ್ನು ದುರಂತವಾದ ದುಃಖದಿಂದ ದೂರಮಾಡಿದೆ. ನಿನ್ನ ಮೇಲೆ ಭಗವಂತನ ಪೂರ್ಣಕಟಾಕ್ಷವಿರಲಿ

ಮಧುಮಾಧವನು ಜೇಡರ ಬಲೆಯಲ್ಲಿ ಬಿದ್ದ ಹುಳುವಿನಂತೆ ಮುಂದಣ ಗತಿಗೋತ್ರಗಳನ್ನರಿಯದವನಾಗಿ ವ್ಯಸನದಿಂದ ತಲೆವಾಗಿರಲು, ಸರೋಜಸುಂದರಿಯು ಕನಿಕರದಿಂದ—ಮಹಾಶಯ! ನಾವು ಪಾರ್ವತ್ಯಪ್ರದೇಶಗಳಲ್ಲಿ ಸಂಚರಿಸುತ್ತಿರುವಾಗ, ಇಬ್ಬರು ನಮ್ಮ ದೃಷ್ಟಿಗೆ ಬಿದ್ದುದು ನಿನಗೆ ಜ್ಞಾಪಕದಲ್ಲಿರಬಹುದು, ಎಂದಳು.

ಮಧು—ಜ್ಞಾಪಕದಲ್ಲಿರುವುದು.

ಸರೋಜ—ಅವರಲ್ಲಿ ಒಬ್ಬನು ನನ್ನನ್ನು ದುರದುರನೆ ನೋಡಿಕೊಂಡು ಹೋದನು.

ಮಧು—ಹೋದನು.

ಸರೋಜ—ಆತನೇ ನಾನಿದ್ದು ತಪ್ಪಿಸಿಕೊಂಡ ಕಾರಾಗೃಹದ ಅಧಿಕಾರಿಯು. ಆತನು ನನ್ನನ್ನು ಹೊಂಚುಹಾಕುತ್ತಿರಬಹುದು ; ಆದುದರಿಂದಲೇ ನನ್ನನ್ನು ಅವರು ಆಕ್ರಮಣಮಾಡಿದರು. ಮಧು ಮಹಾಶಯ ! ಇನ್ನು ನಾವು ಇಲ್ಲಿರುವುದು ಅಪಾಯಕರವು. ಈ ಕೂಡಲೆಯೇ ನಾವು ರಾಜನಗರಕ್ಕೆ ಹೋಗಿ ಪರಂತಪನ ಮರೆಹೊಕ್ಕು ಬದುಕಿಕೊಳ್ಳುವ ಮಾರ್ಗವೊಂದೇ ಉಳಿದಿರುವುದು

ಮಧು—ಈ ಇಬ್ಬರು ಘಾತುಕರ ಗತಿ?

ಸರೋಜ—ನಮ್ಮ ಮಾದಿಯು ಬೆಳಗಾದ ಕೂಡಲೆ ಅವರಿಬ್ಬರ ಬಂಧನವನ್ನೂ ಬಿಚ್ಚಿಬಿಡುವಳು.

ಸರೋಜಸುಂದರಿಯು ಹೀಗೆ ಹೇಳಿ ಮಧುಮಾಧವನನ್ನು ಕರೆದುಕೊಂಡು ರಾತ್ರಿಯ ಗಾಢಾಂಧಕಾರದಲ್ಲಿ ರಾಜನಗರಾಭಿಮುಖವಾಗಿ ತೆರಳಿದಳು. ಆಕೆಯು ದಾರಿಯಲ್ಲಿ ಮಧುಮಾಧವನನ್ನು ಕುರಿತು—ಮಧು ಮಹಾಶಯ ! ನಮ್ಮಿಬ್ಬರ ಬಾಳೂ ಹೀಗಾಗಿಹೋದುದಲ್ಲಾ ! ದೈವ ಲೀಲಾ ವಿಲಾಸವು ಹೀಗಾಗುವುದೂ ಉಂಟೇ? ಎಂದು ನುಡಿದುದನ್ನು ಕೇಳಿ ಯುವಕನು—ಸರೋಜ ! ನಾವು ದೈವಕ್ಕೆ ಅಧೀನರೇ ಹೊರತು, ಅಧಿಪತಿಗಳಲ್ಲ. ಅದು ಕುಣಿಸಿದ ಹಾಗೆಲ್ಲಾ ನಾವು ಕುಣಿಯಲೇ ಬೇಕು, ಎಂದು ನುಡಿದು ಸುಮ್ಮನಾದನು.

ಅಷ್ಟು ಹೊತ್ತಿಗೆ ಅಂತರಿಕ್ಷದಲ್ಲಿ ದಟ್ಟವಾಗಿ ಸೇರಿಕೊಂಡಿದ್ದ ಮೋಡಗಳು ಒಂದೊಂದಾಗಿ ದೂರದೂರ ಸರಿದು ಹೋದುವು. ಚಂದ್ರನು ತನ್ನ ಅಮೃತ ಕಿರಣಗಳಿಂದ ಜಗತ್ತಿನ ಮೇಲೆ ಸಮ್ಮೋಹ

ನಾಸ್ತ್ರವನ್ನು ಬೀರಲಾರಂಭಿಸಿದನು. ಪ್ರಪಂಚದ ಜಂಗಮವರ್ಗ ದಲ್ಲಿ ಸಂಮೋಹನಾಸ್ತ್ರದ ಮಹಾಮಹಿಮೆಯನ್ನು ಅರಿಯದ ಪ್ರಾಣಿಗಳೇ ಇಲ್ಲವೆಂದು ನಮ್ಮ ನಂಬುಗೆಯು. ಈ ಅಸ್ತ್ರಕ್ಕೆ ಗುರಿ ಯಾಗದ ಪ್ರಾಣಿಯು ಸ್ಥಾವರವಾಗಿರಬೇಕು—ಇಲ್ಲವೆ, ಪರಬ್ರಹ್ಮ ಸ್ವರೂಪವೇ ಆಗಿರಬೇಕು. ಕೇವಲವಾಗಿ ಪ್ರಾಪಂಚಿಕವ್ಯವಹಾರ ದಲ್ಲಿಯೇ ತೇಲಿ ಮುಳುಗುತ್ತಿರುವ ಮಾನವನ ವರ್ತನವನ್ನು ಕುರಿತು ಹೇಳತಕ್ಕದೇನಿರುವುದು ?

ನಮ್ಮ ಕಥಾನಾಯಕನಾದ ಮಧುಮಾಧವನೆಂಬ ಯುವ ಕನೂ ಮಾನವನೇ ಆಗಿರುವುದರಿಂದ, ಚಂದ್ರನು ಬೀರಿದ ಸಂಮೋಹ ನಾಸ್ತ್ರವು ಆತನ ಮರ್ಮವನ್ನು ಭೇದಿಸಿತು. ಆತನು ಈ ಯಾತನೆ ಯನ್ನು ತಡೆಯಲಾರದವನಾಗಿ, ಸರೋಜಸುಂದರಿಯ ಕೈಗಳನ್ನು ಹಿಡಿದುಕೊಂಡು—ಸರೋಜ, ಸರೋಜ! ಎಂದು ಹಂಬಲಿಸಿದನು.

ಸರೋಜಸುಂದರಿಯು ಮಧುಮಾಧವನ ಹೃದಯದಲ್ಲಿ ಉಂಟಾದ ಭಾವ ಪರಿವರ್ತನೆಯನ್ನು ಕಂಡುಕೊಂಡವಳಾಗಿ— ಮಹಾಶಯ! ಅಕಸ್ಮಾತ್ತಾಗಿ ಇಷ್ಟು ಉತ್ತೇಜಿತನಾಗಲು ಕಾರಣ ವೇನು? ಎಂದು ಮೃದುಮಧುರ ಸ್ವರದಿಂದ ಮಾತನಾಡಿದಳು.

ಮಧು—ಸರೋಜ! ನನ್ನ ಮನವು ಭಾವಾಂತರದಿಂದ ತಲ್ಲಣಿಸಿ ಹೋಗುತ್ತಿರುವುದು. ಚಂದ್ರೋದಯದಲ್ಲಿಯೂ ಈ ದಾರುಣವಾದ ತಾಪವು ನನ್ನನ್ನು ಅಧೀರನನ್ನಾಗಿ ಮಾಡುತ್ತಿರು ವುದು. ಸರೋಜ! ನನಗೆ ಮುಂದೇನು ಗತಿ?

ಸರೋಜ—(ಹೆದರಿದವಳಾಗಿ) ಮಹಾಶಯ! ನಿನ್ನ ಶರೀರದಲ್ಲಿ ಅಸ್ವಸ್ಥತೆಯೇನಾದರೂ ಕಾಣಬರುತ್ತಿರುವುದೇ? ಈ ಸಮಯದಲ್ಲಿ ಇಂತಹ ದಾರುಣವಾದ ತಾಪಕ್ಕೆ ಅವಕಾಶವಾದರೂ ಏನು?

ಮಧು—ಸರೋಜ! ನನ್ನ ಆಂತರ್ಯದ ಸಂಕಟವನ್ನು ನಾನು ಏನೆಂದು ಅರುಹಲಿ? ನನ್ನ ಮನವಾದರೋ ನಿನಗಾಗಿಯೇ ತುಟುಗುಟ್ಟುತ್ತಿರುವುದು ನಿನ್ನ ಪ್ರೇಮಾಲಾಪವೊಂದೇ ನನ್ನ ಇಹ ಜೀವನದ ಜೀವನೌಷಧವು ನನ್ನನ್ನು ಅಳಿಸುವುದೂ ಉಳಿಸುವುದೂ ನಿನ್ನ ಪಾಲಿನದಾಗಿರುವುದು

ಸರೋಜ—(ಮುಗುಳು ನಗೆಯೊಡನೆ) ಮಧು ಮಹಾಶಯ! ಇದೇನು, ಎಂದೂ ಇಲ್ಲದ ವಚನವೈಖರಿಯು? ನಿನಗಾಗಿ ನಾನು ಮಾಡಬೇಕಾದ ಆವ ವಿಷಯದಲ್ಲಿ ನ್ಯೂನತೆಯನ್ನು ಕಂಡುಕೊಂಡು ಹೀಗೆಲ್ಲಾ ಮಾತನಾಡುತ್ತಿರುವೆ?

ಮಧು—ನಾನು ಹೇಳುವುದಕ್ಕೆ ಬಂದುದು ನ್ಯೂನತೆಯ ವಿಷಯವಲ್ಲ.

ಸರೋಜ—ಹಾಗಾದರೆ ಮತ್ತೇನು?

ಮಧು—(ಸಂಕೋಚದಿಂದ) ಸರೋಜ! ನನ್ನ ಮನದ ಆವೇಗವನ್ನು ಅರುಹುವುದಕ್ಕೆ ನನಗೆ ಬಾಯೇ ಬಾರದು

ಸರೋಜ—ಇದಕ್ಕೆ ನಾನೇನ ಮಾಡಲಿ?

ಮಧು—ಸರೋಜಸುಂದರಿ! ನೀನು ಮನಸ್ಸು ಮಾಡಿದರೆ ನಾನು ಬದುಕಿಕೊಳ್ಳುವೆನು. ಇಲ್ಲವಾದರೆ, ನನ್ನ ಪರಿಣಾಮವು

ನೆಟ್ಟಗಾಗಲಿಕ್ಕಿಲ್ಲ. ಇದರ ಮೇಲೆ ಹಣೆಯಲ್ಲಿ ಬರೆದುದು ನಡೆದೇ ಹೋಗಲಿ.

ಸರೋಜ—ಮಹಾಶಯ! ನನ್ನಿಂದ ನಿನಗೆ ಪ್ರಾಣವುಳಿವುದಾದರೆ, ನಾನು ನಿನಗಾಗಿ ಆವ ಕೆಲಸವನ್ನಾದರೂ ಮಾಡುವೆನು. ಕರ್ತವ್ಯವನ್ನು ಬೋಧಿಸು; ನಾನು ಸಿದ್ಧಳಾಗಿಯೇ ಇರುವೆನು.

ಮಧು—ಸರೋಜ! ನಾನು ಏನೆಂದು ತಾನೇ ಹೇಳಿಕೊಳ್ಳಲಿ? ನನ್ನ ಸಂಕಟವಾದರೋ ಹೇಳಿಕೊಳ್ಳತಕ್ಕುದಾಗಿಲ್ಲ.

ಸರೋಜ—ಮಹಾಶಯ! ಇಲ್ಲಿ ಮತ್ತಾರೂ ಇಲ್ಲದಿರುವುದರಿಂದ, ನಿನ್ನ ಮನವನ್ನು ಬಿಚ್ಚಿ ಹೇಳುವುದಕ್ಕೆ ಸಂಕೋಚವೇನು! ಆರೂ ಮಾಡದ ತಪ್ಪನ್ನು ನೀನೇನೂ ಮಾಡಿಲ್ಲವಷ್ಟೇ?

ಮಧು—ನನ್ನದು ತಪ್ಪೋ, ಸರಿಯೋ ನನಗೊಂದೂ ಗೊತ್ತಾಗಲೊಲ್ಲದು. ನೀನು ಸರಿಯೆಂದರೆ, ಸರಿ; ನೀನು ತಪ್ಪೆಂದರೆ ಅದು ತಪ್ಪಾಗಿಯೇ ಹೋಗುವುದು. ಬಳಿಕ ನಾನು ಬದುಕುವುದಕ್ಕಿಂತಲೂ ಸಾಯುವುದೇ ಮೇಲೆನಿಸುವುದು.

ಸರೋಜ—ನಾನು ಸರಿಯಾದುದನ್ನು ತಪ್ಪೆಂದೂ, ತಪ್ಪಾದುದನ್ನು ಸರಿಯೆಂದೂ ಎಂದೂ ಸಾಧಿಸತಕ್ಕವಳಲ್ಲ. ನನಗೂ ಯುಕ್ತಾಯುಕ್ತ ವಿವೇಚನೆಯ ವಯಸ್ಸು ಬಂದಿರುವುದು.

ಮಧು—ಸರೋಜಸುಂದರಿ! ಆವುದೋ ಕಾರಣದಿಂದ ನನ್ನ ಮನವು ನಿನ್ನಲ್ಲಿಯೇ ಲೀನವಾಗಿ ಹೋಗಿರುವುದು. ನನ್ನ ಮನವು ನಿನ್ನನ್ನೇ ನೋಡುತ್ತಿರಬೇಕೆಂದು ಬಯಸುವುದು, ನಿನ್ನ

ಸುವಿನುಡಿಗಳನ್ನೇ ಕೇಳುತ್ತಿರಬೇಕೆಂದು ಹಾರೈಸುವುದು, ನಿನ್ನೊಡನೆ ಆವಾಗಲೂ ಒಡನಾಡುತ್ತಿರಬೇಕೆಂದು ಹಂಬಲಿಸುತ್ತಿರುವುದು. ನಾನು ಎಷ್ಟು ತೆರನಾಗಿ ಅದನ್ನು ಬಿಗಿ ಹಿಡಿದರೂ, ಅದು ನನ್ನ ಸ್ವಾಧೀನಕ್ಕೆ ಬರಲೊಲ್ಲದು.

ಸರೋಜ—ಮಹಾಶಯ ! ತಟ್ಟನೆ ಹೀಗಾಗುವುದಕ್ಕೆ ಕಾರಣವೇನು? ನಿನ್ನ ವಿಕಾರವಾದರೋ ಬಲವತ್ತರವಾಗಿಯೇ ಇರುವುದೆಂದು ತೋರುವುದು

ಮಧು—ಸರೋಜ ! ನನ್ನ ಮನವೆಂಬ ಜಾತ್ಯಶ್ವವು ಹತೋಟ ಮೀರಿ ನಿನ್ನ ಕಡೆಗೆ ಪಲಾಯನ ವಾಗುತ್ತಿರುವುದು. ನೀನು ನನ್ನಲ್ಲಿ ಕೃಪೆಯಿಟ್ಟು ಅದನ್ನು ನಿನ್ನ ಹೃದಯವೆಂಬ ಲಾಯದಲ್ಲಿ ಬಲವಾಗಿ ಕಟ್ಟಿಹಾಕು.

ಸರೋಜ—ಮಧು ಮಹಾಶಯ ! ನಿನ್ನ ಮನವು ನನ್ನನ್ನು ಕಂಡರೆ ಹೀಗೇಕಾಡುವುದು?

ಮಧು—ಅದರ ಕಾರಣವು ನನಗೆ ಗೊತ್ತಿಲ್ಲವಾದರೂ, ಅದು ನಿನ್ನನ್ನು ಪ್ರೀತಿಸಿರುವುದರಿಂದ ಈ ರೀತಿಯಲ್ಲಿ ವರ್ತಿಸುತ್ತಿರಬಹುದು.

ಸರೋಜ—ಅದು ನನ್ನನ್ನು ಪ್ರೀತಿಸುತ್ತಿರುವುದೇ?

ಮಧು—ತ್ರಿಕರಣ ಶುದ್ಧಿಯಿಂದಲೂ ಪ್ರೀತಿಸುತ್ತಿರುವುದು, ನೀನು ಮಟ್ಟಿಗೆ ಆ ಪ್ರೀತಿಗೆ ಭಂಗವನ್ನು ತಂದೊಡ್ಡ ಬೇಡ, ಕಂಡೆಯಾ? ನಾವಿಬ್ಬರೂ ಆ ಪ್ರೀತಿಯಿಂದ ಬದ್ಧರಾಗಿ ಸಂಸಾರ ಯಾತ್ರೆಯನ್ನು ಆನಂದದಿಂದ ನೆರವೇರಿಸುವ.

ಸರೋಜ—ಮಹಾಶಯ ! ನಿನ್ನ ಪ್ರೀತಿಯು ಒಳ್ಳೆಯ ಸಮಯದಲ್ಲಿಯೇ ಕಾಲ ಹಾಕಿತು. ಬಲು ಮಾತಿನಿಂದೇನು? ಪ್ರೀತಿಗೆ ಕಾಲಾಕಾಲವೆಂಬುದೇ ಇಲ್ಲವೆಂದು ನಾನು ಕೇಳಿರುವೆನು. ಎಂದೂ ಇಲ್ಲದ ಪ್ರೀತಿಯು ಈ ಸಮಯದಲ್ಲಿ ಉಂಟಾಗಲು ಕಾರಣವೇನು?

ಮಧು—ಸರೋಜಸುಂದರಿ ! ಇದರಲ್ಲಿ ಮುಚ್ಚುಮರೆಯೇನಿರುವುದು? ನಾನು ನಿನ್ನನ್ನು ಮೊದಲಿನಿಂದಲೂ ಪ್ರೀತಿಸುತ್ತಿದ್ದೆನು ಈಗ ಅದು ಮೇರೆವಪ್ಪಿ ಉಕ್ಕಿ ಹರಿದು ಬಂದಿತು.

ಸರೋಜ—ಮಧುಮಾಧವ ಮಹಾಶಯ ! ಇದೀಗ ಬಲು ಚೆನ್ನಾಗಿರುವುದು ! ನಮ್ಮಿಬ್ಬರಿಗೂ ಪರಿಚಯವುಂಟಾಗಿ ಇನ್ನೂ ನಾಲ್ಕು ದಿನಗಳು ಪೂರ್ಣವಾಗಿಲ್ಲ, ಹಾಗೂ ನನ್ನ ಸ್ವಭಾವವೆಂಥದೆಂಬುದನ್ನು ನೀನು ಇನ್ನೂ ಅರಿಯಲಾದವನಾಗಿರುವೆ. ಹೀಗಿರುವಲ್ಲಿ ಇಷ್ಟು ಬೇಗನೆ ನಿನ್ನ ಮನವು ಪ್ರೀತಿಯೆಂಬುದರ ಸ್ವಾರಸ್ಯವನ್ನು ಅರಿತ ಬಗೆ ಹೇಗೆ? ಇದರ ಮೇಲೂ ನಾನು ಅಡುಗೂಳಜ್ಜಿಯ ದಾಸಿ; ದಾಸಿಯನ್ನು ಪ್ರೀತಿಸುವುದು ತಮ್ಮಂತಹ ಮಹಾಪುರುಷರಿಗೆ ಎಂದಿಗೂ ತಕ್ಕುದಲ್ಲ

ಮಧು—ಈ ಮಾತು ನನಗೆ ಬೇಕಿಲ್ಲ; ಪ್ರೀತಿಯು ಇದೊಂದನ್ನೂ ಲೆಕ್ಕಿಸದು ನಿನ್ನಲ್ಲಿ ರೂಪವೂ, ಉದಾರಹೃದಯವೂ, ವಿನಯವೂ ತುಂಬಿ ತುಳುಕಾಡುತ್ತಿರುವುವು ಈ ಮೂರು ಗುಣಗಳೇ ಸದ್ಗೃಹಿಣಿಗೆ ಮುಖ್ಯಲಕ್ಷಣವು. ಇದಕ್ಕಾಗಿಯೇ ನನ್ನ ಮನವು ನಿನ್ನಲ್ಲಿ ಲೀನವಾಗಿಹೋಗಿರುವುದು. ಆದುದರಿಂದ,

ಸರೋಜ! ನಾವಿಬ್ಬರೂ ಪತಿ ಪತ್ನಿಯರಾಗಿರಬೇಕೆಂದು ನನ್ನ ಕೋರಿಕೆ. ನೀನು ಒಪ್ಪುವುದಾದರೆ ನಾನೇ ಧನ್ಯನು

ಸರೋಜ—ಮಹಾಶಯ! ಹೆಂಗುಸನ್ನು ಪ್ರೀತಿಸುವ ಲಕ್ಷಣವು ಬಲು ಚೆನ್ನಾಗಿರುವುದು! ಪ್ರೀತಿಯೆಂಬುದು ಆಟದ ಸಾಮಗ್ರಿಯಲ್ಲ, ಕೊಟ್ಟು ತೆಗೆಯುವುದಕ್ಕೆ ಅಂಗಡಿಯಲ್ಲಿ ಮಾರಾಟಕ್ಕಾಗಿ ಹರಡಲ್ಪಟ್ಟಿರುವ ವಸ್ತುವು ಮೊದಲೇ ಅಲ್ಲ. ಪ್ರೀತಿಯು ಹುಡುಕಿದರೆ ಸಿಕ್ಕತಕ್ಕದಲ್ಲ, ತಿಣಿಕಿದರೆ ಬರತಕ್ಕದಲ್ಲ ಪ್ರೀತಿಯ ರೀತಿಯೇ ಬೇರೆ ಮಧುಮಾಧವ ಮಹಾಶಯ! ಮಾತು ಬಂದಾಗ ಮಾತನಾಡಲೇ ಬೇಕಾಗಿರುವುದು ಈ ವಿಷಯದಲ್ಲಿ ನನ್ನ ಅಭಿಪ್ರಾಯವನ್ನಾದರೂ ಕೇಳು ನಾನು ದುರಾಶೆಯ ಹುಡುಗಿಯೆಂಬುದು ನಿನಗೂ ಗೊತ್ತೇ ಇರಬಹುದು ನಾನು ಮನೋರಥ ರಾಜ್ಯದಲ್ಲಿ ರಾಣಿಯಾಗಿದ್ದುಕೊಂಡು ರಾಜ್ಯಭಾರಮಾಡಬೇಕೆಂಬ ಬಯಕೆಯನ್ನು ಬಹುಕಾಲದಿಂದಲೂ ಪೋಷಿಸುತ್ತಿರುವೆನು. ಈ ಬಯಕೆಗೆ ಅನುಸಾರವಾಗಿ ಒಬ್ಬ ಧನಕುಬೇರನನ್ನೇ ವಿವಾಹವಾಗಬೇಕೆಂದು ಸಂಕಲ್ಪಿಸಿಕೊಂಡಿರುವೆನು. ಹಣದಲ್ಲಿ ನನಗೆ ತುಂಬಾ ಅಭಿಲಾಷೆಯು. ನನ್ನ ಬಂಧು ಬಾಂಧವರೆಲ್ಲರೂ ಲಕ್ಷಾಧಿಪತಿಗಳಾಗಿರುವುದರಿಂದ, ನಾನು ದರಿದ್ರನನ್ನು ಕೈಹಿಡಿದರೆ ಜನರು ಏನೆಂದುಕೊಂಡಾರು? ನಾನು ಕನಿಕರದಿಂದ ಕಷ್ಟದಲ್ಲಿ ಸಿಲುಕಿಕೊಂಡಿರುವ ನಿನಗೆ ಉಪಕಾರ ಮಾಡೋಣವೆಂದು ಮುಂದುವರಿದು ಬಂದ ಮಾತ್ರಕ್ಕೆ, ನೀನು ಹೀಗೆಲ್ಲಾ ಸ್ವತಂತ್ರಿಸಿ ಕೇಳಬಹುದೇ? ಇದಕ್ಕಾಗಿಯೇ ಗಂಡಸರು ದುಡುಕಿಗಳೆಂದು ಹೇಳುವುದು ಸುಳ್ಳಲ್ಲ.

ಮಧು—(ಅಪ್ರತಿಭನಾಗಿ) ಸರೋಜಸುಂದರಿ! ನನ್ನ ಅಪರಾಧವನ್ನು ಕ್ಷಮಿಸು ನಾನು ಅರಿಯದೆಯೇ ತಿರುಪುಟ್ಟಿಗೆ ಕೈಹಾಕಿದೆನು. ಈಗ ನನ್ನ ಸ್ವಾರ್ಥತೆಯು ಎಂಥದೆಂಬುದು ನನಗೇ ಗೊತ್ತಾಯಿತು. ನಾನು ನಿಜವಾಗಿಯೂ ಬೀದಿಯ ಬಿಕಾರಿ. ನಾನು ನಿನ್ನ ಬಳಿಯಲ್ಲಿ ಕ್ಷಮಾಪಣೆಯನ್ನು ಬೇಡಿ, ನನ್ನ ನಿಷ್ಫಲವಾದ ಪ್ರೀತಿಯನ್ನು ಮತ್ತೇ ಹಿಂದಕ್ಕೆ ತೆಗೆದುಕೊಳ್ಳುವೆನು.

ಸರೋಜ—ಯುವ ಮಹಾಶಯ! ಇದಾರಾಡುವ ಮಾತು? ಮಾತನ್ನು ಹಿಂದಿರುಗಿ ತೆಗೆದುಕೊಳ್ಳುವುದೆಂದರೇನು? ಹಾಗೆ ತೆಗೆದುಕೊಂಡ ಮಾತ್ರಕ್ಕೆ ನನ್ನ ಮನದಲ್ಲಿ ನಟ್ಟ ಅಭಿಪ್ರಾಯವು ಅಳಿಸಿಹೋಗಬಲ್ಲುದೇ? ಇದೊಂದು ಒಳ್ಳೆಯ ನೂತನ ಪದ್ಧತಿಯು! ಆಡಿದ ಮಾತು ಆಡಿಯೇ ಹೋದುದು; ಅದನ್ನು ಹಿಂದಿರುಗಿ ತೆಗೆದುಕೊಳ್ಳಲಾಗಲಾರದು, ಮಹಾಶಯ!

ಮಧು—ರಮಣೀಮಣಿ! ನಾನೇನೋ ಹಿಂದಿರುಗಿ ತೆಗೆದುಕೊಂಡು ಬಿಟ್ಟೆನು ನನ್ನ ತಪ್ಪಿಗಾಗಿ ಕ್ಷಮೆಯನ್ನೂ ಬೇಡಿದುದಾಯಿತು. ಇನ್ನು ಮುಂದೆ ಅದರ ಸುದ್ದಿಯೇ ಬೇಡ.

ಸರೋಜ—ಮಹಾಶಯ! ಸುಲಭವಾಗಿ ನೀನು ಬಿಟ್ಟರೂ, ನಾನು ಮಟ್ಟಿಗೆ ಬಿಡೆನು. ಕಾರಣವೇನೆಂದರೆ—ನನ್ನ ಮೊದಲಿನ ಮನೋರಥಪ್ರಪಂಚವೆಲ್ಲವೂ ಮಾಯವಾಗಿ ಬಿಟ್ಟುದು. ನನ್ನ ಆ ದುರಾಶೆಯೂ ದೂರ ಸರಿದುದು. ಇನ್ನು ನಾನು ಆ ಸರೋಜಸುಂದರಿಯಲ್ಲ. ಗೊತ್ತಾಯಿತೇ?

ಮಧು—ನನಗೊಂದೂ ಗೊತ್ತಾಗುವುದಿಲ್ಲ.

ಸರೋಜ—ನೀನು ಚುರುಕಲ್ಲ.

ಮಧು—ನಾನು ಚುರುಕೆಂದು ಹೇಳಿದವರಾರು? ನಾನು ದಡ್ಡರಿಗೆ ದಡ್ಡ.

ಸರೋಜ—ಹಾಗೆಯೇ? ಹಾಗಾದರೆ ಈ ಸರೋಜ ಸುಂದರಿಯು ಇಂದಿನಿಂದ ದಡ್ಡರಿಗೆ ದಡ್ಡನಾದವನನ್ನೇ ಪ್ರೀತಿ ಸುವಳು. ನಿನ್ನ ದಡ್ಡತನವೇ ನನ್ನ ಆ ಸುಖಸ್ವಪ್ನಗಳೆಲ್ಲವನ್ನೂ ನಿಷ್ಫಲವನ್ನಾಗಿ ಮಾಡಿಬಿಟ್ಟಿತು ಪ್ರಿಯ ಮಹಾಶಯ! ನೀನು ದಡ್ಡನೆಂದರೇನು? ಇದನ್ನು ಆರಾದರೂ ನಂಬತಕ್ಕವರೇ? ನೀನು ಮಹಾಸಮರ್ಥನೂ, ಮಾನ್ಯನೂ ಆಗಿರುವುದರಿಂದ, ನಿನ್ನ ಪ್ರೀತಿ ಯೂ ನನಗೆ ಶಿರೋಧಾರ್ಯವಾದುದು. ಅದುಕಾರಣ ನೀನು ನನ್ನನ್ನು ಪ್ರೀತಿಸುವುದಕ್ಕಿಂತಲೂ ಅತಿಶಯವಾಗಿ ನಾನೂ ನಿನ್ನನ್ನು ಪ್ರೀತಿಸುತ್ತಿರುವೆನು ನಿನ್ನ ಪ್ರೀತಿಯೇ ನನಗೆ ಸರ್ವಸ್ವವೂ ಆಗಿರು ವುದು. ನಿನ್ನ ಪ್ರೀತಿಗಿಂತಲೂ ಮಿಂಚಿದ ಸಂಪತ್ತಾವುದಿರುವುದು?

ಮಧು—ಸರೋಜ! ಮೊದಲಿನಿಂದಲೂ ನೀನು ರಹಸ್ಯ ಮಯಿಯಾಗಿಯೇ ಇರುವೆ ನಿನ್ನ ಅಂತರ್ಯವೇ ಗೊತ್ತಾಗ ಲೊಲ್ಲದು ನೀನು ನನ್ನನ್ನು ಮನಬಂದಂತೆ ಸೂತ್ರದ ಬೊಂಬೆ ಯನ್ನು ಕುಣಿಸುವಂತೆ ಕುಣಿಸುತ್ತಿರುವೆ ನಾನು ಧೈರ್ಯದಿಂದ ಆವ ಕೆಲಸ ಮಾಡುವುದಕ್ಕೂ ದಿಕ್ಕೇ ತೋರದಾಗಿರುವುದು. ಪ್ರೀತಿ ಸಿದರೆ ಒಂದು ಬಗೆಯ ಕಷ್ಟವಾದರೆ, ಪ್ರೀತಿಸದಿದ್ದರೆ ಮತ್ತೊಂದು ಬಗೆಯ ಕಷ್ಟ ಕಷ್ಟವೇ ನನ್ನ ಹಣೆಯಲ್ಲಿ ಬರೆದಿರುವುದಾದರೆ, ನೀನು ನನಗಾಗಿ ನಿನ್ನ ಆಶೋತ್ತರಗಳನ್ನು ವರ್ಜಿಸಬೇಕಾದುದೇನೂ ಇರುವುದಿಲ್ಲ. ನಿನ್ನನ್ನು ಕೂಡುವುದೇ ಸ್ವರ್ಗವು, ಅಗಲುವುದೇ ನರಕವು; ಆದರೂ ನಿನಗೆ ತೊಂದರೆಯನ್ನುಂಟುಮಾಡಿ ಕೂಡು ವುದಕ್ಕಿಂತಲೂ, ನಿನಗೆ ಸಂತೋಷವನ್ನುಂಟುಮಾಡಿ ಅಗಲುವುದೇ

ಲೇಸು. ಅದುಕಾರಣ, ಸರೋಜಸುಂದರಿ ! ನಿನಗೆ ಎಲ್ಲಿ ಇಷ್ಟವೋ ಎಲ್ಲಿ ಹಿತವೋ, ಎಲ್ಲಿ ಸುಖವೋ, ಎಲ್ಲಿ ಪ್ರಯೋಜನವೋ ಅಲ್ಲಿಯೆ ಸಂಬಂಧವನ್ನು ಬಳೆಯಿಸು. ನಾನಾದರೋ ಬಡತನದ ಬೀದಿಯ ಬಿಕಾರಿ

ಸರೋಜ—ಹಾಗೆಯೋ ?

ಮಧು—ಅದು ಹಾಗೆಯೇ ಸರಿ

ಸರೋಜ—ನನಗೆ ಸುಖವನ್ನು ಉಂಟುಮಾಡಬೇಕೆ ಬುದೇ ನಿನ್ನ ಪರಮೋದ್ದೇಶವಾಗಿರುವುದರಿಂದ, ನನ್ನ ಇಷ್ಟಕ ನೀನು ಅಡ್ಡಿಯಾಗಿ ಬರಲಾರೆಯುಷ್ಟೇ? ನನಗೆ ಇದರ ನಂಬು ಯಾಗಬೇಕು

ಮಧು—ನಿನ್ನ ಇಷ್ಟಕ್ಕೆ ನಾನು ಅಡ್ಡಿಯಾಗಿ ಬರು ದೆಂದರೇನು ? ನಿನ್ನ ಇಷ್ಟಕ್ಕೆ ನಾನೂ ಸಹಾಯನು. ನೀನು ಮಾಡಿ ಉಪಕಾರಕ್ಕೆ ನಾನು ಇಷ್ಟನ್ನಾದರೂ ಮಾಡದ ಮೇಲೆ, ಭೂಮಿಯ ಮೇಲೆ ನನ್ನಂತಹ ಕೃತಘ್ನರಾರಿರುವರು ? ನಿನಗೆ ಆರಲ್ಲಿ ಇಷ ವಿರುವುದೆಂಬುದನ್ನಾದರೂ ತಿಳಿಸು ; ನಾನೇ ಮುಂದೆ ನಿಂತ ಅದನ್ನು ಆಗಮಾಡಿಸಿಕೊಡುವೆನು.

ಸರೋಜ—ಇದು ಸತ್ಯವೇ ?

ಮಧು—ಇದು ಸತ್ಯ.

ಸರೋಜ—ಮಧು ಮಹಾಶಯ ! ನಾನು ನಿನ್ನನ್ನ ಪ್ರೀತಿಸುವೆನು ನಿನ್ನನ್ನು ವರಿಸುವುದರಿಂದ ನನಗೆ ಸ್ವರ್ಗಸುಖವ ಉಂಟಾಗುವುದು. ಅದು ಕಾರಣ ನಿನ್ನಲ್ಲಿ ಪ್ರೇಮಭಿಕ್ಷೆಗಾ

ಕಾದಿರುವೆನು. ಪೂರ್ಣಕಟಾಕ್ಷವಿಟ್ಟು ಈ ಚರಣದಾಸಿಯ ಮನೋರಥವನ್ನು ಈಡೇರಿಸಿಕೊಡಬೇಕೆಂದು ಸೆರಗೊಡ್ಡಿ ಬೇಡುವೆನು.

ಮಧು—ಸರೋಜ! ಈ ಅಭಿಪ್ರಾಯ ಪಡುವೆಯಾ? ಇದು ಅಂತರಂಗ ಶುದ್ಧಿಯಿಂದ ಆಡಿದ ಮಾತಷ್ಟೇ? ನನ್ನನ್ನು ಮತ್ತೆ ಧರ್ಮಸಂಕಟದಲ್ಲಿ ಸಿಲುಕಿಸಿ ಗೋಳಿಡಿಸಬೇಡ, ಕಂಡೆಯಾ?

ಸರೋಜ—ಪ್ರಿಯ ಮಹಾಶಯ! ನಿನ್ನ ಪ್ರೀತಿಯೇ ಎಲ್ಲದಕ್ಕಿಂತಲೂ ದೊಡ್ಡದು ಅದರಿಂದ ನಾನು ನನ್ನ ಆಶೋತ್ತರಗಳೆಲ್ಲವನ್ನೂ ಸಾಧಿಸಿಕೊಳ್ಳಬಲ್ಲೆನು ಪ್ರೀತಿಯಿಲ್ಲದ ಧನಕುಬೇರನನ್ನು ನಾನು ವರಿಸಿ ಮಣ್ಣ ತಿನ್ನಬೇಕಷ್ಟೇ! ಪ್ರೀತಿಯಿಂದ ನನ್ನ ಗುಡಿಸಲೇ ಅರಮನೆಯಾಗುವುದು ಪ್ರೀತಿಯಿಂದಲೇ ಸ್ವರ್ಗ; ಪ್ರೀತಿಯಿಂದಲೇ ಸಮಸ್ತ ಭೋಗಗಳು; ಪ್ರೀತಿಯಿಂದಲೇ ಎಲ್ಲಾ ವೈಭವಗಳು; ಪ್ರೀತಿಯಿಂದಲೇ ಭಗವಂತನೊಲಿವನು ಪ್ರೀತಿಯೆಂಬುದೇ ಪರಾತ್ಪರ ವಸ್ತುವಿನ ನೈಜಸ್ವರೂಪವು. ಇಂತಹ ಅಮೂಲ್ಯವಾದ ಪ್ರೀತಿಯ ಬಂಧನದಿಂದ ನಾವಿಬ್ಬರೂ ಬದ್ಧರಾಗಿ, ಪ್ರೀತಿಸ್ವರೂಪನಾದ ಭಗವಂತನನ್ನು ಪ್ರೀತಿ ಪುಷ್ಪಗಳಿಂದ ನಿರಂತರದಲ್ಲಿಯೂ ಆರಾಧಿಸುವ.

ಮಧುಮಾಧವ ಸರೋಜಸುಂದರಿಯರಿಬ್ಬರೂ ತಾರಾಪತಿಯಾದ ಚಂದ್ರನನ್ನು ಸಾಕ್ಷಿಯಾಗಿಟ್ಟುಕೊಂಡು ಮಾನಸಿಕವಿಧಿಯಿಂದ ವಧೂವರರಾಗಿ ಆನಂದಮಂದಾಕಿನಿಯಲ್ಲಿ ಮಿಂದು, ಬೆಳಗಾಗುವುದರೊಳಗಾಗಿ ರಾಜನಗರಕ್ಕೆ ಬಂದು ಪರಂತಪ ಮಹಾಶಯನ ಮನೆಯನ್ನು ಸೇರಿಕೊಂಡರು.

---

## ಹತ್ತನೆಯ ವಿಲಾಸ

### ಉಪಸಂಹಾರ

ಬೆಳಗಾಯಿತು. ಪ್ರಾತಃಕೃತ್ಯಗಳೆಲ್ಲವೂ ಯಥಾವಿಧಿಯಾ ನಡೆದ ಬಳಿಕ, ಪರಂತಪನು ಸರೋಜಸುಂದರಿಯನ್ನು ಕುರಿತು— ಸರೋಜ! ದೇವರ ದಯೆಯಿರಲಿಕ್ಕಾಗಿ, ನನ್ನ ಪ್ರಯತ್ನಗಳೆಲ್ಲ ಫಲಿಸಿದುವು. ಕಳ್ಳರ ಗುಂಪೂ, ಅದಕ್ಕೆ ಯಜಮಾನಿಯಾದ ಒಃ ಹೆಂಗುಸೂ ಸಿಕ್ಕಿಬಿದ್ದಿರುವರು. ನಾನು ಇವರೆಲ್ಲರನ್ನೂ ಪೋಲೀ ಅಧಿಕಾರಿಗಳ ವಶಪಡಿಸಿರುವೆನು. ನಾಳೆಯ ದಿನವೇ ಅವರ ಹೇಳಿ ಯಾಗುವುದು, ಎಂದನು

ಸರೋಜ—ಆ ಹೆಂಗುಸೇ ನಮ್ಮ ಮಿತ್ರಮಹಾಶಯ ಗೂಢ ಶತ್ರುವೇ?

ಪರಂತಪ—ಅಹುದು; ಗೂಢವಾದ ಪರಮ ಶತ್ರು ಆಕೆಯು ಅವತರಿಸಿ ಬಂದ ಯಮಕಿಂಕರಿ.

ಸರೋಜ—ಆಕೆಯು ತಪ್ಪನ್ನು ಒಪ್ಪಿಕೊಂಡು ಪೂವ ಕಾರಣವೆಲ್ಲವನ್ನೂ ತಿಳಿಸಿರುವಳೇ?

ಪರಂ—ತಿಳಿಸಿರುವಳು; ತಿಳಿಸದಿದ್ದರೆ ಬಿಡುವವರಾರು ಅಯ್ಯೋ ಪಾಪ! ಆಕೆಯು ತುಂಬಾ ದಿವಸ ಬದುಕುವಂತಿ ಆಕೆಯ ಗಂಡನೇ ಕಳ್ಳರ ಗುಂಪಿಗೆ ಒಡೆಯನಾಗಿದ್ದನಂತೆ. ಜಗ ದಲ್ಲಿ ಆತನು ಮಡಿದನಂತೆ, ಬಳಿಕ ಈ ಹೆಂಗುಸೇ ಮಧುಮಾ ವನ ತಂದೆಯನ್ನು ಕೊಲ್ಲಿಸಿ, ಆತನ ವಂಶವನ್ನು ನಿರ್ಮೂ ಮಾಡುವುದಕ್ಕಾಗಿ ಇಲ್ಲಿಗೂ ಬಂದಿರುವಳಂತೆ. ಈ ಸುದ್ದಿಯ

ಯೋಗನಾರಾಯಣನ ಕಿವಿಗೂ ಬಿದ್ದಿತು. ಆತನು ತನ್ನ ಅವಿವೇಕಕ್ಕಾಗಿ ಬಲುವಾಗಿ ನೊಂದುಕೊಂಡು, ಮಧುಮಾಧವನಿಗೆ ೨೫,೦೦೦ ರೂಪಾಯಿಗಳ ಬಹುಮಾನವನ್ನು ಕೊಡುವುದಾಗಿ ವಾಗ್ದಾನಮಾಡಿರುವನು.

ಸರೋಜಸುಂದರಿಯು ಹಣದ ಗಂಟಿನ ವಿಚಾರವಾಗಿ ಆವ ಮಾತನ್ನೂ ಆಡದೆ,—ಮಹಾಶಯ! ನಮ್ಮ ಮಿತ್ರಮಹಾಶಯನು ನಿರ್ಭಯನಾಗಿ ರಾಜನಗರದಲ್ಲಿ ಸಂಚರಿಸ ಬಹುದಷ್ಟೇ? ಎಂದು ಕೇಳಿದಳು

ಪರಂ—ಸಂಚರಿಸಬಹುದು; ಭಯವೇನೂ ಇರಲಾರದು

ಸರೋಜ—ಸರಕಾರದ ಅಧಿಕಾರಿಗಳನ್ನು ನಂಬುವುದಕ್ಕಿಲ್ಲ ಅವರು ಒಂದಲ್ಲದಿದ್ದರೆ ಮತ್ತೊಂದನ್ನಾದರೂ ಗಂಟು ಹಾಕಿಕೊಂಡೇ ಇರುವರು ಏನಾದರೂ ಲಾಭ ಪ್ರಯೋಜನಗಳುಂಟಾಗಬಹುದೆಂದು ಆರನ್ನಾದರೂ ಹಿಸಕಿ ಹಿಂಡುತ್ತಲೇ ಇರುವರು. ಇದಕ್ಕಾಗಿಯೇ ನಾನು ಮತ್ತೆ ಪ್ರಶ್ನೆಮಾಡಿದುದು.

ಪರಂ—ಈ ತೊಂದರೆಗಳಾವುವೂ ಇಲ್ಲ; ಆದರೆ—

ಸರೋಜ—ಮತ್ತೇನು ತಾಪತ್ರಯ, ಮಹಾಶಯ?

ಪರಂ—ಅಂತಹ ತಾಪತ್ರಯವೇನೂ ಇಲ್ಲದಿದ್ದರೂ, ಆನಂದವನ್ನು ತೋರ್ಪಡಿಸುವುದಕ್ಕಾಗಿ ಬರತಕ್ಕವರ ತೊಂದರೆಯು ಇದ್ದೇ ಇರುವುದು. ಇದನ್ನು ಅನುಭವಿಸಿಯೇ ತೀರಬೇಕು.

ಸರೋಜಸುಂದರಿಯು ಈ ಸುಖಸಮಾಚಾರವನ್ನು ಮಧು ಮಾಧವನಿಗೆ ತಿಳಿಸಿದಳು ತರುವಾಯ ಆತನು ಆಕೆಯನ್ನು ಕುರಿತು—ಪ್ರಿಯೆ! ನಿನ್ನ ಸಾಹಸವು ಅತ್ಯದ್ಭುತವಾದುದು. ನನ್ನ ಸರ್ವಸ್ವವೂ ನೀನೇ ಆಗಿರುವೆ. ನಿನಗೆ ಪ್ರತ್ಯುಪಕಾರ ಮಾಡಲು, ಈ ಲೋಕದಲ್ಲಿ ಆವ ಸಾಮಗ್ರಿಯೂ ದೊರೆಯಲಾರದು, ಎಂದು ಕಂಬನಿಗರೆಯುತ್ತಾ ಮಾತನಾಡಿದನು

ಸರೋಜ—ನಾನು ಪತಿಗಾಗಿ ನನ್ನ ಕರ್ತವ್ಯವನ್ನು ಮಾಡಿರುವೆನು ನೀನು ನಿನ್ನ ಹೃದಯದ ಒಂದೆಡೆಯಲ್ಲಿ ಈ ಅಧಮ ದಾಸಿಗೆ ಕೊಂಚ ಸ್ಥಲವನ್ನು ಕೊಟ್ಟರೆ ಅದೇ ನನಗೆ ಸ್ವರ್ಗಲಾಭವು. ನಾನು ನಿನ್ನ ಪ್ರಣಯಾಕಾಂಕ್ಷಿಣಿ. ಪ್ರಾಣಕಾಂತ! ನನ್ನ ಬಾಲಭಾವ ಸುಲಭವಾದ ವರ್ತನೆಗಳನ್ನು ಮನ್ನಿಸಿ, ನನ್ನನ್ನು ಪ್ರಣಯದಾಸಿ ಯನ್ನಾಗಿ ಕಲ್ಪಿಸಿಕೊಂಡು ನನ್ನಿಂದ ಸೇವೆಯನ್ನು ತೆಗೆದುಕೊಳ್ಳು. ಇದೇ ನನ್ನ ಪ್ರಾರ್ಥನೆ.

ಮಧು—ಪ್ರಿಯೆ! ಮುಂದಣ ಕೆಲಸವೇನು?

ಸರೋಜ—ಹಣದ ಗಂಟನ್ನು ಯೋಗನಾರಾಯಣನಿಗೆ ಸಲ್ಲಿಸುವುದೊಂದೇ ಉಳಿದಿರುವುದು.

ಮಧು—ಆತನು ಇಷ್ಟಕ್ಕೆ ಪಾತ್ರವಲ್ಲ.

ಸರೋಜ—ಅದನ್ನು ವಿಚಾರಮಾಡುವುದು ನಮ್ಮ ಕೆಲಸ ವಲ್ಲ. ಆ ಹಣವು ಅವನದು. ನಾವು ಅದನ್ನು ಆತನಿಗೆ ಸಲ್ಲಿಸಲೇ ಬೇಕು.

ಹೀಗೆಯೇ ಒಬ್ಬರಿಗೊಬ್ಬರು ಮಾತುಕತೆಗಳನ್ನಾಡಿಕೊಂಡು ಸಂಧ್ಯಾಕಾಲದ ವರೆಗೂ ಕಾಲವನ್ನು ಕಳೆದು ಬಳಿಕ ವಿಲಾಸ ಪುರಕ್ಕೆ ಬಂದು ಯೋಗನಾರಾಯಣನನ್ನು ಕಂಡರು. ಯೋಗ ನಾರಾಯಣನು ಮಧುಮಾಧವನನ್ನು ನೋಡಿದ ಕೂಡಲೆ, ಆನಂದ ಭರಿತನಾಗಿ—ಮಧು ಮಹಾಶಯ! ನಾನು ವಿವೇಕವಿಲ್ಲದೆಯೇ ಬಾಯಿಗೆ ಬಂದಹಾಗೆ ನಿನ್ನನ್ನು ಮೂದಲಿಸಿದೆನು. ನೀನು ಅದೆಲ್ಲ ವನ್ನೂ ಮರೆತು ನನ್ನನ್ನು ಮನ್ನಿಸಬೇಕು. ಈಗ ನಿಜವಾದ ಅಪ ರಾಧಿಗಳು ಸಿಕ್ಕಿ ಬಿದ್ದಿರುವರು; ಆದರೆ ಹಣವು ಮಟ್ಟಿಗೆ ಕೈಗೆ ಸಿಕ್ಕುವಂತಿಲ್ಲ, ಮಾಡುವುದೇನು? ಎಂದು ಸಂಕಟದಿಂದ ಮಾತ ನಾಡಿದನು.

ಮಧು—ಪೂಜ್ಯ ಮಹಾಶಯ! ದೈವ ದುರ್ಘಟನೆಯಿಂದ ತಾವು ನನ್ನ ಮೇಲೆ ಅಪರಾಧವನ್ನು ಹೊರಿಸಿದುದು ಸಹಜ ವಾಗಿಯೇ ಇರುವುದು. ಈಗಳಾದರೂ ನನ್ನ ನಿರಪರಾಧಿತ್ವವು ತಮ್ಮ ತಿಳಿವಿಗೆ ಬಂದುದಕ್ಕಾಗಿ ನಾನು ತಮ್ಮನ್ನು ಬಲುವಾಗಿ ವಂದಿಸುವೆನು. ನನ್ನನ್ನು ಬಂಧನದಿಂದ ಬಿಡುಗಡೆ ಮಾಡಿಕೊಡುವು ದಾದರೆ, ನಾನು ಅಪರಾಧಿಗಳನ್ನು ಪತ್ತೆ ಮಾಡಿಕೊಡುವುದಾಗಿ ಹೇಳಿದ್ದೆನು. ಅದು ತಮ್ಮ ಚಿತ್ತಕ್ಕೆ ಬರಲಿಲ್ಲ. ನಾನೇ ಬಂಧನ ದಿಂದ ಬಿಡುಗಡೆಯಾಗಿ ತಮ್ಮ ಕೆಲಸವನ್ನು ನೆರವೇರಿಸಿರುವೆನು.

ಯೋಗ—ಇದರ ತತ್ತ್ವವನ್ನು ಬಿಡಿಸಿ ಹೇಳಿದ ಹೊರತು, ನನಗೆ ಅರ್ಥವೇ ಆಗುವಂತಿಲ್ಲ.

ಮಧು—ಇದು ಅರ್ಥದ ವಿಷಯವೇ ಆಗಿರುವುದರಿಂದ, ಅರ್ಥವಾಗುವುದಿಲ್ಲವೆಂದರೇನು? ನಾನೇ ಅದರ ಅರ್ಥವನ್ನು ವಿವ

ರಿಸಿ ಹೇಳುವೆನು. ಒಂದು ಕಾಸೂ ಲೋಪವಿಲ್ಲದ ಹಾಗೆ, ತಮ್ಮ ಹಣವೆಲ್ಲವೂ ಸಿಕ್ಕಿರುವುದು ನಾನು ಅದನ್ನು ಕೊಡುವುದಕ್ಕಾಗಿಯೇ ಇಲ್ಲಿಗೆ ಬಂದಿರುವೆನು.

ಯೋಗೆ—(ಅಚ್ಚರಿಯಿಂದ) ಏನು, ಹಣವೇ ?

ಮಧು—ಅಹುದು ; ಕಳುವಾದ ತಮ್ಮ ಹಣ.

ಮಧುಮಾಧವನು ಹೀಗೆ ಹೇಳಿ ಆ ಹಣದ ಗಂಟನ್ನು ಯೋಗನಾರಾಯಣನ ಮುಂಗಡೆಯಲ್ಲಿಟ್ಟನು ಯೋಗೆ ಮಹಾಶಯನು ಹಣವನ್ನು ನೋಡಿ ಬೆರಗಾಗಿ ಒಂದು ಕ್ಷಣಕಾಲ ಮೌನದಿಂದ ಕುಳಿತುಕೊಂಡುಬಿಟ್ಟನು. ಬಳಿಕ ಮಧುಮಾಧವನು ನಡೆಯಿಸಿದ ಒಂದೊಂದು ಸಂಗತಿಯನ್ನೂ ಯೋಗೆಮಹಾಶಯನಿಗೆ ತಿಳಿಸಿ ಹೊರಡುವುದಕ್ಕೆ ಸಿದ್ಧನಾದನು ಯೋಗನಾರಾಯಣನು ಮಧುಮಾಧವನ ಸತ್ಯಸಂಧತೆಗೂ ಉದಾರ ಬುದ್ಧಿಗೂ ಪರಮಾಶ್ಚರ್ಯಭರಿತನಾಗಿ—ಮಧು ಮಹಾಶಯ ! ನನ್ನದೊಂದು ಪ್ರಾರ್ಥನೆ, ಎಂದನು

ಮಧು—ಅಪ್ಪಣೆಯಾಗಬೇಕು.

ಯೋಗೆ—ಮಹಾಶಯ ! ನನ್ನ ಕೋರಿಯಲ್ಲಿ ನಿನ್ನನ್ನು ಸಮಭಾಗಸ್ಥನನ್ನಾಗಿ ಏರ್ಪಡಿಸಿಕೊಳ್ಳಬೇಕೆಂದು ಆಲೋಚಿಸಿರುವೆನು. ನೀನು ನನ್ನಲ್ಲಿ ಕೃಪೆಯಿಟ್ಟು ಒಪ್ಪಿಕೊಳ್ಳಬೇಕು.

ಮಧು—ಕ್ಷಮಿಸಬೇಕು, ಮಹಾಶಯ ! ನಾನು ಈ ಜನ್ಮದಲ್ಲಿ ಪರಸೇವೆಯನ್ನು ಮಾಡುವುದಿಲ್ಲವೆಂದು ಸಂಕಲ್ಪಮಾಡಿಕೊಂಡಿರುವೆನು. ತಾವು ನನ್ನನ್ನು ನಿರ್ಬಂಧ ಪಡಿಸಲಾಗದು.

ತಮ್ಮ ಉದಾರಹೃದಯಕ್ಕಾಗಿ ನಾನು ಎಷ್ಟೋ ಕೃತಜ್ಞನಾಗಿರುವೆನು.

ಯೋಗೆ—ಹಾಗಾದರೆ ನನ್ನ ಅಲ್ಪ ಸಂತೋಷವನ್ನಾದರೂ ಸ್ವೀಕರಿಸಿ, ನನ್ನನ್ನು ಧನ್ಯನನ್ನಾಗಿ ಮಾಡಬೇಕೆಂದು ಕೇಳಿಕೊಳ್ಳುವೆನು.

ಯೋಗನಾರಾಯಣನು ಹೀಗೆ ಹೇಳಿ ತನ್ನ ಪೆಟ್ಟಿಗೆಯಿಂದ ೨೫,೦೦೦ ರೂಪಾಯಿಗಳನ್ನು ತೆಗೆದು ಮಧುಮಾಧವನಿಗೆ ಸ್ವೀಕರಿಸಬೇಕೆಂದು ಕೇಳಿಕೊಂಡನು ಮಧುಮಾಧವನು, ಬಳಿಕ ಸರೋಜಸುಂದರಿಯ ಅಭಿಪ್ರಾಯವನ್ನು ತಿಳಿಯುವುದಕ್ಕಾಗಿ ಆಕೆಯ ಮುಖವನ್ನು ನೋಡಿದನು ಆಕೆಯು, ಹಣವನ್ನು ತೆಗೆದುಕೊಳ್ಳುವುದರಲ್ಲಿ ದೋಷವೇನೂ ಇಲ್ಲವೆಂದು ಹೇಳಿದ ಮೇಲೆ, ಮಧುಮಾಧವನು ಆ ಹಣವನ್ನು ಸ್ವೀಕರಿಸಿ ಆತನ ಅಪ್ಪಣೆಯನ್ನು ಪಡೆದುಕೊಂಡು ಸರೋಜಸುಂದರಿಯೊಡನೆ ಹೊರಹೊರಟನು.

ಇಷ್ಟರೊಳಗಾಗಿ ಯೋಗನಾರಾಯಣನು ಮಧುಮಾಧವನನ್ನು ಮತ್ತೆ ಕರೆಯಿಸಿಕೊಂಡು—ಮಹಾಶಯ! ಒಂದು ಸಂಗತಿಯನ್ನು ತಿಳಿಸುವುದಕ್ಕೆ ಮರತೇ ಹೋಗಿದ್ದಿತು. ಈ ದಿನ ಆರೋ ದೊಡ್ಡ ಮನುಷ್ಯರೊಬ್ಬರು ನಿನ್ನನ್ನು ಹುಡುಕಿಕೊಂಡು ನನ್ನ ಬಳಿಗೆ ಬಂದಿದ್ದರು, ಎಂದು ಹೇಳಿದನು.

ಮಧು—ಆತನಾರು? ಆತನ ಹೆಸರೇನು?

ಯೋಗೆ—ಅದೊಂದೂ ನನಗೆ ತಿಳಿಯದು.

ಮಧು—ಕಾರಣವನ್ನಾದರೂ ತಾವು ವಿಚಾರಮಾಡೋಣವಾಯಿತೇ?

ಯೋಗ—ಅದೂ ಇಲ್ಲ.

ಮಧುಮಾಧವನು ತನ್ನನ್ನು ಮತ್ತಾವ ಶತ್ರುವು ಬೆನ್ನಟ್ಟಿ ಬಂದಿರುವನೋ ಎಂಬ ಭಯದಿಂದ ನಡುಗಿದವನಾಗಿ—ಸ್ವಾಮಿಾ! ಆತನ ಆಕಾರ ಪ್ರಕಾರಗಳನ್ನಾದರೂ ತಿಳಿಸಲು ಸಾಧ್ಯವೇ? ಎಂದು ಪ್ರಶ್ನೆಮಾಡಿದನು.

ಯೋಗ—ನಾನು ಸಾಕ್ಷಾತ್ತಾಗಿ ಆತನನ್ನು ನೋಡಿದವನಲ್ಲ. ನಮ್ಮ ಮನೆಯಲ್ಲಿದ್ದ ಸೋದರ ಸೊಸೆಯು ಈ ವಿಷಯವನ್ನು ನನಗೆ ತಿಳಿಸಿದಳು. ಈಗ ಆಕೆಯು ತನ್ನ ಗ್ರಾಮಕ್ಕೆ ಹೊರಟುಹೋದಳು.

ಮಧು—ಆತನ ಪ್ರಶ್ನೆಯ ಪರಿಪಾಟಿಯಾದರೂ ಹೀಗೆಂಬುದು ತಮಗೆ ಗೊತ್ತುಂಟೆ?

ಯೋಗ—ಅದೂ ಗೊತ್ತಿಲ್ಲ; ಆದರೂ ನಿನ್ನನ್ನು ಅತ್ಯಾವಶ್ಯಕವಾಗಿ ನೋಡಬೇಕೆಂಬ ಅಭಿಪ್ರಾಯವು ಆತನಿಗಿದ್ದಂತೆ ನನ್ನ ಸೊಸೆಯು ತಿಳಿಸಿದಳು.

ಮಧು—ಆತನು ಇಳಿದಿರುವ ಸ್ಥಲವನ್ನಾದರೂ ತಿಳಿಸಿ ಹೋದನೇ?

ಯೋಗ—ಅದೂ ಇಲ್ಲ.

ಮಧುಮಾಧವನು ಈ ಮಾತನ್ನು ಕೇಳಿ ಆವ ವಿಷಯವೂ ಗೊತ್ತಾಗದಿದ್ದುದಕ್ಕಾಗಿ ತುಂಬಾ ವ್ಯಸನಪಟ್ಟುಕೊಂಡು ಹೊರ

ಟನು ಆತನು ದಾರಿಯಲ್ಲಿ ನಡೆದು ಬರುತ್ತಾ--ಸರೋಜ! ಇದು ಆಶ್ಚರ್ಯಕರವಾದುದೇ ಸರಿ ಇದರಿಂದ ನನ್ನ ಮನದಲ್ಲಿ ಭಯವೇ ತೋರಿಬರುತ್ತಿರುವುದು, ಎಂದು ನುಡಿದನು.

ಸರೋಜ—ಪ್ರಿಯನೆ! ವಿಮುಖವಾಗಿದ್ದ ದೈವವು ಸುಮುಖವಾಗುತ್ತಿರುವಲ್ಲಿ ಭಯಕ್ಕೆ ಆವ ಕಾರಣವೂ ಇರಲಾರದು. ದೈವವು ಮತ್ತಾವ ಆನುಕೂಲ್ಯವನ್ನು ಉಂಟುಮಾಡುವುದಕ್ಕಾಗಿ ಗುರಿಯಿಟ್ಟಿರುವನೋ ಬಲ್ಲವರಾರು? ಮತ್ತೊಂದು ಶುಭ ಸಮಾಚಾರವು ನಿನಗೆ ಕಾದಿರುವುದೆಂದು ನನಗೆ ತೋರುತ್ತಿರುವುದು. ಇದೆಲ್ಲವೂ ನನ್ನ ಸುಯೋಗವು.

ಇಬ್ಬರೂ ಈ ರೀತಿಯಾಗಿ ಮಾತನಾಡಿಕೊಂಡು ರಾಜನಗರಕ್ಕೆ ಬಂದು ಪಾನಾಹಾರಮಂದಿರದಲ್ಲಿ ಕುಳಿತರು ಆಗ ಸರೋಜ ಸುಂದರಿಯ ದೃಷ್ಟಿಯು ಒಂದು ವ್ಯಕ್ತಿಯ ಮೇಲೆ ಬಿದ್ದಿತು. ಆಕೆಯು ಆ ವ್ಯಕ್ತಿಯನ್ನು ಎವೆಯಿಕ್ಕದೆ ನೋಡುತ್ತಾ ಕುಳಿತಿರುವಲ್ಲಿ ಮಧುಮಾಧವನು—ಸರೋಜ! ಆರನ್ನು ನೋಡುತ್ತಿರುವೆ? ಎಂದು ಪ್ರಶ್ನೆ ಮಾಡಿದನು

ಸರೋಜ—ನಮ್ಮಿದಿರನಲ್ಲಿ ದೂರವಾಗಿ ಕುಳಿತಿರುವ ಮನುಷ್ಯನನ್ನು ನೋಡು

ಮಧು—ನೋಡಿದೆನು

ಸರೋಜ—ಹಿಂದೆ ಎಂದಾದರೂ ಆತನನ್ನು ನೀನು ನೋಡಿರುವೆಯಾ?

ಮಧು—ನೋಡಿದ ಹಾಗೆ ಜ್ಞಾಪಕವಿಲ್ಲ.

ಸರೋಜ—ಆಶ್ಚರ್ಯದ ಸುದ್ದಿ.

ಮಧು—ಅದು ಹೇಗೆ?

ಸರೋಜ—ನಿನ್ನನ್ನು ವಿಚಾರಿಸಿಕೊಂಡು ಬಂದಿದ್ದ ದೊಡ್ಡ ಮನುಷ್ಯನು ಈತನೇ ಆಗಿರುವನು.

ಮಧು—(ಆಶ್ಚರ್ಯದಿಂದ) ಈತನೆಯೇ?

ಸರೋಜ—ಅಹುದು.

ಮಧು—ನಿನಗೆ ಗೊತ್ತಾದುದು ಹೇಗೆ?

ಸರೋಜ—(ನಕ್ಕು) ನಾನು ಪ್ರಸಿದ್ಧನಾದ ಪತ್ತೇದಾರನ ಕುವರಿಯಲ್ಲವೇ?

ಮಧು—ಅಲ್ಲವೆನ್ನುವರಾರು?

ಸರೋಜ—ನನ್ನ ಕಣ್ಣಿನಲ್ಲಿ ಸೂಕ್ಷ್ಮಗ್ರಹಣಶಕ್ತಿಯುಂಟು. ನೋಡಿದೊಡನೆಯೇ ಅನೇಕ ವಿಷಯಗಳು ನನ್ನ ತಲೆಯಲ್ಲಿ ಹೊಳೆಯುವುವು.

ಮಧು—ಅದು ಸುಳ್ಳಲ್ಲ.

ಸರೋಜ—ಆತನು ನಿನಗೆ ದೇಹಾನುಬಂಧಿಯು.

ಮಧು—ನನ್ನ ಸಂಬಂಧಿಯೇ?

ಸರೋಜ—ಅಹುದು; ಸಂಬಂಧಿಯು.

ಮಧು—(ಬೆರಗಾಗಿ) ನೀನು ಹೀಗೆ ಹೇಳಲು ಕಾರಣ ವೇನು?

ಸರೋಜ—ನಿನಗೂ ಆತನಿಗೂ ಅದ್ಭುತವಾದ ಹೋಲಿಕೆ ಯಿರುವುದೇ ಕಾರಣವು.

ಮಧು—ಹೋಲಿಕೆ! ಇದೆಂತಹ ಮಾತು?

ಸರೋಜ—ಪ್ರಿಯನೇ! ಆತನೇ ನಿನ್ನ ತಂದೆಯಾಗಿರ ಬೇಕೆಂದು ನಾನು ಪ್ರಮಾಣಮಾಡಿಹೇಳಬಲ್ಲೆನು. ನಿನಗೆ ಮೇಲಿಂದ ಮೇಲೆ ಯೋಗವು ಉಕ್ಕಿಬರುತ್ತಿರುವುದು ಯೋಗ ಬರುವು ದಾದರೆ, ಬೇಡವೆನ್ನುವರಾರು?

ಮಧುಮಾಧವನು ಈ ಮಾತನ್ನು ಕೇಳಿ ಆತಂಕದಿಂದ ಕಳವಳ ಗೊಂಡವನಾಗಿ—ಸರೋಜ! ನಾವು ಮುಂದೆ ಮಾಡಬೇಕಾದು ದೇನು? ಎಂದು ಪಿಸುಮಾತಿನಲ್ಲಿ ಕೇಳಿದನು.

ಅದಕ್ಕೆ ಉತ್ತರವಾಗಿ ಸರೋಜಸುಂದರಿಯು ಹೇಳಿದುದು ಈ ರೀತಿಯಾಗಿದ್ದಿತು.—

"ಪ್ರಭೂ! ಅದರ ವಿಚಾರವೆಲ್ಲವೂ ನನಗಿರಲಿ. ನಾನು ಇಲ್ಲಿ ಮತ್ತೊಂದು ಬಗೆಯ ಪತ್ತೇದಾರಿಯ ಕೆಲಸವನ್ನು ನಡೆಯಿಸ ಬೇಕಾಗಿರುವುದು. ನೀನು ನಾವಿಳಿದಿರುವ ಸ್ಥಲಕ್ಕೆ ಹೋಗಿ ಕಾದಿರು. ನಾನು ಮನೆಗೆ ಬರುವಾಗ ಆತನನ್ನೂ ಕರೆದುಕೊಂಡು ಬರುವೆನಲ್ಲದೆ, ಅನೇಕ ವಿಷಯಗಳನ್ನೂ ಜತೆಯಲ್ಲಿಯೇ ತರು ವೆನು. ನೀನು ಈ ವಿಷಯಗಳನ್ನು ಕಟ್ಟಿಕೊಂಡು ಸುಮ್ಮನೇ ಕೊಗ

ಗುತ್ತಾ ಕುಳಿತಿರಬೇಡ. ಪತ್ತೇದಾರನ ಮಗಳು ನಿನ್ನ ಪ್ರಾಣಕಾಂತೆ ಯೆಂಬುದು ಚೆನ್ನಾಗಿಯೂ ಜ್ಞಾಪಕದಲ್ಲಿರಲಿ.''

ಈ ಮಾತನ್ನು ಕೇಳಿಕೊಂಡು ಮಧುಮಾಧವನು ತನ್ನ ಬೀಡಾರದ ಕಡೆಗೆ ತೆರಳಿದನು. ಸರೋಜಸುಂದರಿಯು ಆ ಅಪರಿಚಿತನನ್ನು ನೋಡುತ್ತಾ ಕುಳಿತುಬಿಟ್ಟಳು. ಕೊಂಚ ಹೊತ್ತಾದ ತರುವಾಯ ಅಪರಿಚಿತನು ಅಲ್ಪಾಹಾರವನ್ನು ಸೇವಿಸಿ ಹೊರಗೆ ಬಂದು ಆನಾವುದನ್ನೋ ಚಿಂತಿಸುತ್ತಾ ಮನಬಂದ ಕಡೆಗೆ ತೆರಳಿದನು. ಸರೋಜಸುಂದರಿಯೂ ಆತನ ಹಿಂದೆಹಿಂದೆಯೇ ತೆರಳಿದಳು. ಇಬ್ಬರೂ ಬಲು ದೂರ ತೆರಳಿದ ಮೇಲೆ, ಸರೋಜಸುಂದರಿಯು ಅಪರಿಚಿತನ ಬಳಿಗೈತಂದು—ನಮಸ್ಕಾರ, ರಾಧಾಮಾಧವ ಮಹಾಶಯ, ನಮಸ್ಕಾರ! ತಮ್ಮನ್ನು ಈ ರಾಜನಗರದಲ್ಲಿ ನೋಡಿದುದು ಆಶ್ಚರ್ಯವೇ ಸರಿ, ಎಂದು ಸವಿನುಡಿಯನ್ನಾಡಿದಳು.

ಅಪರಿಚಿತನು ಪರಸ್ಥಳದಲ್ಲಿ ಹೆಸರ ಹಿಡಿದು ಮಾತನಾಡಿಸುವವರಾರೆಂದು ಅಚ್ಚರಿಯಿಂದ ಯುವತಿಯನ್ನು ಕೊಂಚ ಹೊತ್ತು ಎವೆಯಿಕ್ಕದೆ ನೋಡಿದ ಬಳಿಕ—ನೀನಾರು, ತಾಯೆ? ಎಂದು ಪ್ರಶ್ನೆ ಮಾಡಿದನು.

ಸರೋಜ—ನಾನಾರೆಂಬುದು ಗೊತ್ತಾಗಲಿಲ್ಲವೇ?

ಅಪರಿಚಿತ—ಗೊತ್ತಿಲ್ಲ, ತಾಯೆ!

ಸರೋಜ—ಗೊತ್ತಾಗಲು ಕಾರಣವೂ ಇಲ್ಲ.

ಅಪರಿಚಿತ—ಹಾಗೆಂದರೇನು?

ಸರೋಜ—ಕಾರಣವೇನೆಂದರೆ—ತಾವು ನನ್ನನ್ನು ಎಂದೂ ನೋಡಿದವರೇ ಅಲ್ಲ.

ಅಪರಿ—ಹಾಗಾದರೆ ನನ್ನನ್ನು ಹೆಸರ ಹಿಡಿದು ಕರೆಯಲು ಕಾರಣವೇನು? ನನ್ನ ಹೆಸರು ನಿನಗೆ ಗೊತ್ತಾದ ಬಗೆ ಹೇಗೆ?

ಸರೋಜ—ಪ್ರಬಲವಾದ ಹೋಲಿಕೆಯೇ ಕಾರಣ.

ಅಪರಿ—ಅದೆಂತಹ ಹೋಲಿಕೆ?

ಸರೋಜ—ತಿಳಿಸುವೆನು.

ಅಪರಿ—ನನ್ನ ಕುತೂಹಲವನ್ನು ಬೇಗನೆ ನಿವಾರಿಸು.

ಸರೋಜ—ನಿಮಗೂ ನಿಮ್ಮ ಮಗನಿಗೂ ಇರುವ ಹೋಲಿಕೆಯು ಅತ್ಯದ್ಭುತವಾದುದು.

ಅಪರಿ—ಏನ ಹೇಳಿದೆ, ತಾಯೆ? ನನ್ನ ಮಗನೇ?

ಸರೋಜ—ಅಹುದು, ತಮ್ಮ ಮಗ.

ಅಪರಿ—ನನ್ನ ಮಗನಾರೆಂಬುದು ಗೊತ್ತೇ ತಾಯೆ?

ಸರೋಜ—ನನಗೊಬ್ಬ ಮಿತ್ರನಿರುವನು, ಆತನ ಹೆಸರು-ಮಧುಮಾಧವ. ಆತನು ತನ್ನ ಆರನೆಯ ವರ್ಷದಲ್ಲಿ ತಂದೆಯಿಂದ ಬೇರ್ಪಡಿಸಲ್ಪಟ್ಟು, ಇಂದಿನ ವರೆಗೂ ತಾಯಿತಂದೆಗಳಿಲ್ಲದ ತಬ್ಬಲಿಯಂತೆ ಹೇಗೋ ಹಾಗೆ ಹೊಟ್ಟೆಯನ್ನು ಹೊರೆದುಕೊಳ್ಳುತ್ತಿರುವನು.

ಅಪರಿ—ತಾಯೆ! ಸತ್ಯವಾಗಿ ಹೇಳುತ್ತಿರುವೆಯಾ?

ಸರೋಜ—ನಾನು ಕಂಡುದನ್ನು ಕಂಡ ಹಾಗೆಯೇ ಹೇಳುವ ಸಂಪ್ರದಾಯದವಳು. ನಾನು ತಮ್ಮ ಕುಮಾರನನ್ನು ಚೆನ್ನಾಗಿಯೂ ಬಲ್ಲೆನು.

ಅಪರಿ—ಆತನೆಲ್ಲಿರುವನು, ತಾಯೆ?

ಸರೋಜ—ಇಲ್ಲಿಗೆ ಸಮೀಪದಲ್ಲಿಯೇ ಇರುವನು.

ಅಪರಿ—ತಾಯೆ! ನನ್ನಲ್ಲಿ ಪೂರ್ಣಕೃಪೆಯಿಟ್ಟು ಆತನಲ್ಲಿಗೆ ನನ್ನನ್ನು ಕರೆದುಕೊಂಡು ಹೋಗಬಲ್ಲೆಯಾ?

ಸರೋಜ—ಮಹಾಶಯ! ನನ್ನ ಮಾತು ಮುಗಿಯುವವರೆಗೂ ಅದಾಗಲಾರದು.

ಅಪರಿ—ನನ್ನ ಮನವು ತುಟುಗುಟ್ಟುತ್ತಿರುವುದು. ಅದು ಕಾರಣ ನಾನು ಆತನನ್ನು ನೋಡಲೇ ಬೇಕು. ನನ್ನನ್ನು ಆತನ ಬಳಿಗೆ ಕರೆದುಕೊಂಡು ತೆರಳು

ಸರೋಜ—ಮಧುಮಾಧವನೆಂಬ ಮಗನು ನಿಮಗಿದ್ದುದು ಜ್ಞಾಪಕದಲ್ಲಿರುವುದೇ, ಸ್ವಾಮಿ?

ಅಪರಿ—ಜ್ಞಾಪಕವಿದ್ದುದರಿಂದಲೇ, ನಾನು ಆತನನ್ನು ಅನೇಕ ವರ್ಷಗಳಿಂದಲೂ ಹುಡುಕುತ್ತಲೇ ಇರುವೆನು. ನಾನು ಆತನನ್ನು ತ್ಯಾಗ ಮಾಡಿದವನಲ್ಲ. ನನ್ನ ಮಿತ್ರನೊಬ್ಬನಿಂದ ಆತನು ಬೇರ್ಪಡಿಸಲ್ಪಟ್ಟನು ಇದು ನಿಜವಾದ ಮಾತು.

ಸರೋಜ—ತಮ್ಮಂತಹ ದೊಡ್ಡವರು ಸುಳ್ಳನ್ನಾಡುವುದಿಲ್ಲವಾದುದರಿಂದ, ತಾವು ನನ್ನೊಡನೆ ಬರೋಣವಾಗಲಿ; ನಾನು ತಮ್ಮ ಮಗನಿರುವ ಸ್ಥಲವನ್ನು ತೋರುವೆನು.

ಸರೋಜಸುಂದರಿಯು ಹೀಗೆ ಹೇಳಿ ರಾಧಾಮಾಧವ ಮಹಾಶಯನನ್ನು ತನ್ನ ಬೀಡಾರಕ್ಕೆ ಕರೆದುಕೊಂಡು ಹೋಗಿ ತಂದೆಗೊ ಮಗನಿಗೂ ಪರಿಚಯುವನ್ನುಂಟುಮಾಡಿಕೊಟ್ಟಳು. ತಂದೆಗೆ ಮಗನನ್ನು ನೋಡಿದ ಆನಂದವನ್ನೊ, ಮಗನಿಗೆ ತಂದೆಯನ್ನು ನೋಡಿದ ಆನಂದವನ್ನೊ ವರ್ಣಿಸಲು, ನಮ್ಮಂತಹ ಸಂಸಾರದ ನಿಜವಾದ ಸುಖವೇನೆಂಬುದನ್ನೇ ಅರಿಯದ ಗೃಹಸ್ಥಾಶ್ರಮದ ಬ್ರಹ್ಮಚಾರಿಗಳಿಗೆ ಅದೆಂದಿಗೂ ಸಾಧ್ಯದ ಮಾತಲ್ಲವು.

ತಂದೆ ಮಕ್ಕಳು ಬಲು ಹೊತ್ತು ಒಬ್ಬರನ್ನೊಬ್ಬರು ಅಪ್ಪಿಕೊಂಡಿದ್ದ ಬಳಿಕ, ಒಬ್ಬೊಬ್ಬರೂ ತಮ್ಮತಮ್ಮ ಪೂರ್ವವೃತ್ತಾಂತವನ್ನು ಹೇಳಿಕೊಂಡು ಕಣ್ಣೀರ ಸುರಿಸಿದರು. ಈ ಮರ್ಮವಿದಾರಕವಾದ ದೃಶ್ಯವನ್ನು ಆರು ನೋಡಿದ್ದರೂ, ಅವರೆಲ್ಲರೂ ಭಿಕ್ಕಿಬಿಕ್ಕಿ ಅತ್ತುಬಿಡುತ್ತಿದ್ದರು. ನಮ್ಮ ಕಥಾನಾಯಿಕೆಯಾದ ಸರೋಜಸುಂದರಿಯೂ ಉಕ್ಕಿ ಬರುತ್ತಿದ್ದ ವ್ಯಸನವನ್ನು ತಾಳಲಾರದವಳಾಗಿ ಗೊಳೋ ಎಂದು ಅತ್ತುಬಿಟ್ಟಳು.

ಬಳಿಕ ಮಧುಮಾಧವನು ಸರೋಜಸುಂದರಿಯ ವೃಂತ್ತಾಂತವೆಲ್ಲವನ್ನೂ ತಿಳಿಸಿ,—ತಂದೆಯೇ! ತಮಗೆ ಪುತ್ರನ ಪರಿಚಯವಾದುದಲ್ಲದೆ, ಸೊಸೆಯ ಲಾಭವೂ ಉಂಟಾದುದು, ಎಂದು ನುಡಿದನು. ಕೂಡಲೆಯೇ ಸರೋಜಸುಂದರಿಯು ತನ್ನ ಮಾಮನಿಗೆ ನಮಸ್ಕಾರಮಾಡಿದಳು. ರಾಧಾಮಾಧವ ಮಹಾಶಯನು ಸೊಸೆಗೆ "ದೀರ್ಘ ಸುಮಂಗಲೀ ಭವ" ಎಂದು ಶುದ್ಧಾಂತಃಕರಣದಿಂದ ಆಶೀರ್ವದಿಸಿದನು.

ಮರುದಿನ ಪ್ರಾತಃಕಾಲ ತಂದೆಮಕ್ಕಳು ರಾಜನಗರದ ಸೌಂದರ್ಯವನ್ನು ನೋಡುವುದಕ್ಕಾಗಿ ತೆರಳಿದರು. ಸರೋಜ

ಸುಂದರಿಯೂ ಪರಂತಪನನ್ನು ನೋಡುವುದಕ್ಕಾಗಿ ಹೊರಟಳು. ಅಷ್ಟು ಹೊತ್ತಿಗೆ ಸರಿಯಾಗಿ ಜಂಝೂಮಾರುತ ವೀರವಿಕ್ರಮ ರಾಯನು ಪರಂತಪನೊಡನೆ ಮಾತನಾಡುತ್ತಾ ಕುಳಿತಿದ್ದನು. ಸರೋಜಸುಂದರಿಯು ಒಳಗೆ ಬಂದ ಕೂಡಲೆ ನನ್ನ ತಂದೆಯು ಬಂದಿರುವುದನ್ನು ನೋಡಿ ಆನಂದಾವೇಶಪರವಶೆಯಾಗಿ ತಂದೆಯನ್ನು ಅಪ್ಪಿಕೊಂಡು ಕಣ್ಣೀರ ಸುರಿಸಿದಳು. ಆಕೆಯ ತಂದೆಯ ಸಂತೋಷಕ್ಕೆ ಪಾರವೇ ಇರಲಿಲ್ಲ.

ಇತ್ತ ಕಡೆ ಹೊರಹೊರಟದ್ದ ತಂದೆ ಮಕ್ಕಳು ಬಲು ಹೊತ್ತು ಸಂಚಾರಮಾಡಿದ ಬಳಿಕ, ತಂದೆಯು ಮಗನನ್ನು ಕುರಿತು— ಮಗು! ಆ ಸುಂದರಿಯನ್ನು ನೀನು ವಿವಾಹವಾಗುವುದು ನಿಶ್ಚಯವಾಗಿರುವುದಷ್ಟೇ? ಎಂದು ಪ್ರಶ್ನೆಮಾಡಿದನು.

ಮಗ—ನಿಶ್ಚಯವಾಗಿರುವುದು.

ತಂದೆ—ಬಂಡವಾಳವೇನು?

ಮಗ—ಶುದ್ಧವಾದ ಬುದ್ಧಿ, ಬಲುವುಳ್ಳ ತೋಳುಗಳು, ನನ್ನನ್ನೇ ವಿವಾಹವಾಗುವುದಾಗಿ ಸಂಕಲ್ಪಮಾಡಿರುವ, "ಹೆಂಗುಸು-ಎಂದರೆ, ಹೆಂಗುಸು" ಎನ್ನುವಂತಿರುವ ಗುಣವತಿಯಾದ ಯುವತಿಯ ನಿರ್ದುಷ್ಟವಾದ ಪ್ರೇಮದ ಬೆಂಬಲವು,—ಇವುಗಳೆ ಬಂಡವಾಳವು.

ತಂದೆ—ಮಗು! ಈ ಮೂರೇ ನಿನ್ನ ಬಂಡವಾಳವೇ?

ಮಗ—ಇಷ್ಟೇ ನನ್ನ ಬಂಡವಾಳವು.

ತಂದೆ—ಇಷ್ಟೇ ಸಾಕಾದುದೇ?

ಮಗ—ಇದೇ ಬೇಕಾದಷ್ಟಾದುದು.

ತಂದೆ—ಮಗು! ಮೂರು ಪಾದಗಳಿಗಿಂತಲೂ ನಾಲ್ಕು ಪಾದಗಳು ಸಂಸಾರದ ಸ್ಥಿರೀಕರಣಕ್ಕೆ ಮೂಲಭೂತವಾದುವು ನಾನು ಇಷ್ಟು ವರ್ಷಗಳ ಕಾಲ ವ್ಯಾಪಾರಮಾಡಿ ೧,೭೫,೦೦೦ ರೂಪಾಯಿಗಳನ್ನು ಗಳಿಸಿಟ್ಟಿರುವೆನು ಇದು ನಿನಗೆ ನಾಲ್ಕನೆಯ ಬಂಡಿಯಗಾಲವಾಗಿರಲಿ ಈ ಮೊಬಲಗಿನಿಂದ ನೀನು ಸಂಸಾರ ಯಾತ್ರೆಯನ್ನು ಸುಖವಾಗಿ ನೆರವೇರಿಸಿಕೊಂಡು ಹೋಗಬಹುದು.

ತಂದೆಮಕ್ಕಳು ಈ ರೀತಿಯಾಗಿ ಮಾತನಾಡಿಕೊಂಡು ಬೀಡಾರಕ್ಕೆ ಬರುವುದರೊಳಗಾಗಿ, ಸರೋಜಸುಂದರಿಯೂ ಆಕೆಯ ತಂದೆಯೂ ಅಲ್ಲಿಗೆ ಮೊದಲೇ ಬಂದು ಕುಳಿತಿದ್ದರು.

ಮಧುಮಾಧವ ರಾಧಾಮಾಧವರು ಮನೆಗೆ ಬಂದ ಕೂಡಲೆ, ಸರೋಜಸುಂದರಿಯು ಅವರಿಬ್ಬರಿಗೂ ತನ್ನ ತಂದೆಯ ಪರಿಚಯವನ್ನುಂಟುಮಾಡಿಕೊಟ್ಟಳು. ಬಳಿಕ ಮಧುಮಾಧವನು ಸರೋಜಸುಂದರಿಯ ತಂದೆಗೆ ತನ್ನ ತಂದೆಯ ಪರಿಚಯವನ್ನುಂಟುಮಾಡಿಕೊಟ್ಟನು ನಾಲ್ವರೂ ಸುಖಸಂತೋಷಗಳಿಂದ ಭೋಜನಾದಿಗಳನ್ನು ತೀರಿಸಿಕೊಂಡು ಸರಸಾಲಾಪಗಳಲ್ಲಿ ಮಗ್ನರಾಗಿ ಬಲುಹೊತ್ತನ್ನು ಒಂದು ನಿಮಿಷದಂತೆಯೇ ಕಳೆದರು.

ಈ ಅಪೂರ್ವ ಪರಿಚಯ ಮಹೋತ್ಸವವು ನೆರವೇರಿದ ಬಳಿಕ ರಾಧಾಮಾಧವನು ವೀರ ವಿಕ್ರಮರಾಯನನ್ನು ಕುರಿತು—ಪೂಜ್ಯ ಮಹಾಶಯ! ನಾವು ಕನ್ಯಾರ್ಥಿಗಳಾಗಿ ತಮ್ಮಲ್ಲಿಗೆ ಬಂದಿರುವೆವು.

ತಾವು ಉದಾರ ಮನಸ್ಸಿನಿಂದ ನಮ್ಮ ಮಗನಿಗೆ ತಮ್ಮ ಕುವರಿಯನ್ನು ಕೊಟ್ಟು ವಿವಾಹ ಮಹೋತ್ಸವವನ್ನು ನೆರವೇರಿಸಿ ಕೊಡಬೇಕೆಂದು ಪ್ರಾರ್ಥನೆಮಾಡಿದನು.

ವೀರ—ಪೂಜ್ಯ ಮಹಾಶಯ! ಈಗಣ ಕಾಲದಲ್ಲಿ ವೃದ್ಧ ಮಾತಾಪಿತೃಗಳನ್ನು ಕೇಳುವರಾರು? ಹುಡುಗಿಯು ಹುಡುಗನನ್ನೂ, ಹುಡುಗನು ಹುಡುಗಿಯನ್ನೂ ಅನ್ಯೋನ್ಯವಾಗಿ ಒಪ್ಪಿಬಿಟ್ಟರೆ ವಿವಾಹವಾಗಿಬಿಡುವುದು. ಈಗೆ ನಮ್ಮ ಕುವರಿಯು ತಮ್ಮ ಕುವರನನ್ನು ವರಿಸಲು ಇಷ್ಟವುಳ್ಳವಳಾಗಿಯೇ ಇರುವಳು— ... ಮೇಲೆ, ವಿವಾಹವು ಒಂದು ಬಗೆಯಲ್ಲಿ ನಿಶ್ಚಯವಾಗಿಯೇ ...ೋ ಗಿರುವುದು. ನಾಳೆಯ ಸುಮುಹೂರ್ತದಲ್ಲಿ ವಿವಾಹವು ನಮ್ಮ ಮನೆಯಲ್ಲಿ ನೆರವೇರುವುದರಿಂದ, ನಾವುಗಳೆಲ್ಲರೂ ಅಲ್ಲಿಗೆ ಇಂದೇ ತೆರಳುವ. ನಮ್ಮ ಪರಂತಪ ಮಹಾಶಯನು ವಿವಾಹಸಂಭಾರವನ್ನು ಸಜ್ಜುಗೊಳಿಸುವುದಕ್ಕೆ ಮೊದಲೇ ಅಲ್ಲಿಗೆ ತೆರಳಿರುವನು. ನನಗೆ ಪುತ್ರಸಂತಾನವಿಲ್ಲದಿರುವುದರಿಂದ, ನನ್ನ ಪಿತೃಪೈತಾಮಹ ಸಂಪತ್ತೆಲ್ಲವನ್ನೂ ಸರೋಜಸುಂದರಿಗೆ ಬಳುವಳಿಯಾಗಿ ಕೊಟ್ಟಿರುವೆನು.

ವೀರವಿಕ್ರಮರಾಯನು ಹೀಗೆ ಹೇಳಿ ಎಲ್ಲರ... ಕೊಂಡು ತನ್ನ ಮನೆಗೆ ಬಂದು ಬಿಟ್ಟನು. ಯಥಾ... ಮಧುಮಾಧವ ಸರೋಜಸುಂದರಿಯರಿಗೆ ಬಲು ವಿಜೃಂಭಣೆಯಿಂದ ವಿವಾಹಮಹೋತ್ಸವವು ಹತ್ತಾರು ದಿನಗಳು ನಡೆದುದು. ಅನೇಕ ಮಹನೀಯರು ವಿವಾಹ ಮುಹೂರ್ತಕ್ಕೆ ಸರಿಯಾಗಿ ಬಿಜಯ ಮಾಡಿಸಿ ವಧೂವರರಿಗೆ ಸಿದ್ಧಮಂಗಳಾಶೀರ್ವಾದವನ್ನು ಮಾಡಿ ಮಿಷ್ಟಾನ್ನವನ್ನು ತೃಪ್ತಿಯಾಗುವಂತೆ ಭುಂಜಿಸಿ ತಮ್ಮ ತಮ್ಮ

ಮನೆಗೆ ತೆರಳಿದರು. ವಿವಾಹಕ್ಕೆ ಬಂದವರೆಲ್ಲರೂ ವಧೂವರರ ಅನುಕೂಲ ದಾಂಪತ್ಯವನ್ನು ಕೊಂಡಾಡಿದರು. ಎಲ್ಲೆಲ್ಲಿಯೂ ಜಯ ಘೋಷವು ಮೊಳಗಿತು.

ಪ್ರಿಯ ಪಾಠಕ ಮಹಾಶಯ! ನಾವು ಮಧುಮಾಧವ ಸರೋಜಸುಂದರಿಯರಿಗೆ ಸಂಸಾರದಲ್ಲಿದ್ದುಕೊಂಡು ಗೃಹಧರ್ಮವನ್ನು ಚಿರಕಾಲ ಪರಿಪಾಲಿಸುತ್ತಾ ಬರಬೇಕೆಂದು ವೃದ್ಧೋಪದೇಶವನ್ನು ಮಾಡಿ ಮುಂದಕ್ಕೆ ತೆರಳುವವರಾಗಿರುವೆವು.

ನಮ್ಮ ಕಥಾನಾಯಿಕೆಯಾದ ಸರೋಜಸುಂದರಿಯು ಹೆಂಗುಸು—ಎಂದರೆ, ಹೆಂಗುಸಲ್ಲವೇ? ನೀವೇ ಪರ್ಯಾಲೋಚಿಸಿ ನೋಡೋಣವಾಗಲಿ. ಇಂತಹ ಧೈರ್ಯಶಾಲಿನಿಯರಾದ ಹೆಂಗುಸರಿಂದಲೇ ನಮ್ಮ ಭಾರತ ಜನಾಂಗವು ಉದ್ಧಾರವಾಗತಕ್ಕುದಿದೆ.

ಸಂಪೂರ್ಣಂ.

